— ಶ್ರೀ ಪಂಚಾಚಾರ್ಯ ಪ್ರಸೀದಂತು —

# ಮಂತ್ರವಾದಿಗೆ ಮದ್ದು

(ಇದರಲ್ಲಿ ವೀರಶೈವರು ಸ್ಥಾವರಲಿಂಗ ಪೂಜಾ, ತೀರ್ಥಕ್ಷೇತ್ರ, ಗಂಧ-ಕುಂಕುಮ-ಅಕ್ಷತೆ ಧರಿಸುವದು ನಿಷೇಧ ಎಂಬುದರ ಬಗ್ಗೆ ಖಂಡನೆ ಸಹ ಇದೆ.)




ಲೇಖಕರು:

ಶ್ರೀ. ವೇ. ಕರವೀರ ಶಾಸ್ತ್ರಿಗಳು

ಇಂಗಳಗಿ ಗೊಂದಿಮಠ, ಮು|| ಜನ್ನೂರು.



ಇಸ್ವಿ: ೧೯೫೮ ]                [ ಬೆಲೆ: ೧-೦-೦

ಮುದ್ರಕರು:
ಎಲ್. ಆಯ್. ಆಕಳವಾಡಿ,
ಬಿ. ಎ., ಬಿ. ಕಾಮ್.
ಮನೋಹರ ಮುದ್ರಣಾಲಯ,
ಧಾರವಾಡ.

ಪ್ರಕಾಶಕರು:
ಕೊಟ್ರಪ್ಪ ಶಿದ್ಧಲಿಂಗಪ್ಪ ಗೌರಿಃ
ಚನ್ನೂರು.
ಪೋ: ಹೊಸರಿತ್ತಿ, ತಾ: ಹಾವೇ

# ಮುನ್ನುಡಿ

ಶೃತಿ, ಸ್ಮೃತಿ, ಉಪನಿಷತ್ತು, ಆಗಮ, ಪುರಾಣಾದಿಗಳ ತಾತ್ಪರ್ಯವನ್ನೊಳ ಗೊಂಡ 'ಮಂತ್ರವಾದಿಗೆ ಮದ್ದು' ಎಂಬ ಪ್ರಶ್ನೋತ್ತರ ರೂಪದಿಂದ ವೇ. ಮಂ. ಕರವೀರ ಶಾಸ್ತ್ರಿಗಳು ಗೊಂದಿಮಠ, ಸಾ. ಚನ್ನೂರ ಇವರು ಬರೆದ ಗ್ರಂಥವನ್ನು ಸಂಪೂರ್ಣ ಓದಿ ನೋಡಿದೆನು. ಇದು ಪರಮ ವೀರಶೈವ ಸಿದ್ಧಾಂತ ಶಿರೋ ಮಣಿ ಹಾಗು ಸಮಸ್ತ ಶಾಸ್ತ್ರ ಮುಖ್ಯ ಮುಖದರ್ಪಣ, ವೀರಶೈವ ಮತಸ್ಥಾಪನಾ ಚಾರ್ಯರ ಧರ್ಮಧ್ವಜವೆಂದು ಹೇಳಬಹುದು.

ವೀರಶೈವ ಧರ್ಮ ಕಟ್ಟಳೆ, ವೇದಾಗಮ, ಶೃತಿ, ಶಾಸ್ತ್ರಗಳಿಂದಲೇ ವ್ಯಕ್ತ ವಾಗುವದು ಸಹಜವದೆ. ಶೃತಿ-ಶಾಸ್ತ್ರಗಳು ನಮ್ಮನ್ನು ತಿದ್ದಲಿಕ್ಕೆ ಇರುತ್ತವಲ್ಲದೆ, ನಾವು ಆ ಶೃತಿಗಳನ್ನು ತಿದ್ದಲಿಕ್ಕೆ ಇರುವದಿಲ್ಲೆಂಬ ವಿಷಯ ಮಾತ್ರ ಯಾರೂ ಅರಿಯದ್ದಲ್ಲ. ಅ. ಮ. ಪಾಟೀಲರು ಏನಾದರೊಂದು ತಮ್ಮ ದುರುದ್ದೇಶವನ್ನು ನೆಲೆಗೊಳಿಸಬೇಕೆಂದು ಗುರುಲಿಂಗಜಂಗಮ ಶಿವಾತತ್ಪರರಾದ ಶರಣರ ಪವಿತ್ರ ನಾಮದ ಮುಸುಕನ್ನೆಳೆದುಕೊಂಡು ವೀರಶೈವ ಮತ ಸಿದ್ಧಾಂತಗಳಿಗೆ ಅಪಾರ್ಥ ವನ್ನು ಕಲ್ಪಿಸುತ್ತ ಧರ್ಮದ್ರೋಹಿಗಳಾಗಿರುವದು ದುರ್ದೈವದ ಸಂಗತಿಯೇ ಶಾಸ್ತ್ರಾವಲಂಬಿಗಳಾದ ಸಜ್ಜನರು ಹಾಗು ಪಂಡಿತರು ಒಡಂಬಡುವ ಅಭಿ ಪ್ರಾಯದಂತೆ ನಡೆಯುವದು ಶಾಸ್ತ್ರಸಮ್ಮತವೂ ಹಾಗು ಸರ್ವರಿಗೆ ಭೂಷಣವೂ ಂಜಸವೂ ಆಗಿದೆ. ಇದನ್ನು ಬಿಟ್ಟು ದುರ್ಭಾವನೆಯಿಂದ ತಾವು ಹೊಸ ಂಗಮರಾಗಬೇಕೆಂಬ ಹಪಾಹಪಿಯಿಂದ ಬಸವಳಿದು ಬಾಯಿಬಡಕತನ, ಅಸತ್ಯ, ವೃಥಾಕೋಪ, ಮೋಸ, ಈರ್ಷ್ಯಾಸೂಯ ಇತ್ಯಾದಿಗಳನ್ನು ಶ್ರೇಷ್ಠ ಭಕ್ತಿ ಮಾರ್ಗದರ್ಶಕ ಶಾಸ್ತ್ರವಿಚಾರದಲ್ಲಿ ಪ್ರಯೋಗಿಸಿ, ಸಹಜಾರ್ಥದಲ್ಲಿ ಮಣ್ಣ ನ್ನೆರಚುವದಕ್ಕೆ ಹೆಣಗುವದು ಅ. ಮ. ಪಾಟೀಲರಿಗೆ ಸರಿಯಾದದ್ದಲ್ಲವೆಂದು ಈ ಗ್ರಂಥದಲ್ಲಿ ನಿಚ್ಚಳವಾಗಿ ತೋರಿಸಿಕೊಟ್ಟದ್ದು ಸೂಕ್ತವೂ ಸಯುಕ್ತಿಕವೂ

ವೇದಾಗಮ ಶೃತಿ ತಾತ್ಪರ್ಯವು ಸಕಲರಿಗೂ ಸ್ಪಷ್ಟವಾಗಿ ತಿಳಿಯುವದಿ ಂದೇ ಪೂರ್ವಾಚಾರರು ಭಾಷ್ಯಗಳನ್ನು ಬರೆದರು. ಈ ಭಾಷ್ಯಗಳಾದರೂ ಾಮಾನ್ಯ ಜನರಿಗೆ ಅಭೇದ್ಯವೆಂದು ತಿಳಿದು ಬಸವಾದಿ ಪ್ರಮಥರು ಸುಲಭ ಶೈಲಿ ಂದ ಸರ್ವರೂ ತಿಳಿಯಲೆಂದು ಕನ್ನಡ ವಚನಗಳನ್ನು ಬರೆದಿದ್ದಾರೆ. ಹೀಗಿದ್ದು

ಗದಗ ಶರಣ ಸೇವಾ ಸಂಘದವರು ಸ್ವತಃ ವೇದಾಗಮ ಶ್ರುತ್ಯರ್ಥವನ್ನು ಕಣ್ಣಿಟ್ಟು ನೋಡಲಿಕ್ಕೆ ಶಕ್ತಿಯಿಲ್ಲದೆ, ತಮ್ಮಂತೆಯೇ ಅಜ್ಞಾನಿಯಾದ ಅ. ಮ. ಪಾಟೀಲರ ಎಂಬುವ ಮಾತಿನ ಬಲದಿಂದ ಮನಸ್ಸಿಗೆ ಬಂದ ಹಾಗೆ ಶಾಸ್ತ್ರಗಳ ಅರ್ಥವನ್ನು ತಮ್ಮ ಮನಸ್ಸೋಕ್ತದ ಕಡೆಗೆ ಎಳೆದೊಯ್ದು, ಸಂಯಮ ಮುಗ್ಧ ಜನರನ್ನು ಅಧರ್ಮ ಕೂಪದಲ್ಲಿ ನೂಕುತ್ತಿದ್ದಾರೆ. ಇವರ ಈ ಮನೋಧೋರಣೆಯಲ್ಲಿ ಅಷ್ಟಾವರ್ಣದ ಶ್ರೇಷ್ಠ ಗುರುಜಂಗಮರು ಬೇರಾದ ಜಾತಿಯವರು ಆಗಲಿಕ್ಕೆ ಬರುತ್ತದೆಂದು ವಿಧಿ ಗಟ್ಟಿ ಬಯಸ್ಸರಿಸಿ ಬರೆದಿದ್ದಾರೆ. ಇಷ್ಟರ ಮೇಲಿಂದಲೇ ಇವರು ಮರಾಥಿ ಮಾನವ ಬರೆಗೆ ಬಿಟ್ಟಿದೆ. ವೀರಶೈವ ಸಮಾಜ ಕಲ್ಯಾಣಕ್ಕಾಗಿ ಯಥಾರ್ಥವನ್ನು ಬರೆದಿರುವರೆಂದು ಮಾತ್ರ ಯಾರೂ ಸರ್ವಥಾ ನಂಬಲಿಕ್ಕೆ ಬರುವದಿಲ್ಲ ಎಂಬುವದು ಸ್ಪಷ್ಟವಾಗಿದೆ

ವೀರಶೈವ ಶಾಸ್ತ್ರ ಸಮ್ಮತಿಯಂತೆ ನಡೆಯುವ ಸನಾತನ ವೀರಶೈವ ಧರ್ಮ ದೀಕ್ಷೆ ಗುರುವನ್ನು ಪಡೆದ ಮನುಷ್ಯನಿಗೆ ಸಂತಾನವನ್ನು ಹುಟ್ಟಿಸಬೇಕೆಂಬುವದಾಗಿಯೂ ಹೊಟ್ಟೆಕಿಚ್ಚಿನಿಂದ ಬರೆದಿರುವರೆಂಬ ಸಂಗತಿಯು ಇವರು ಬರೆದಿರುವ 'ಮಂತ್ರವಾದಿ' ಎಂಬ ಕಬದ್ಧ ಗ್ರಂಥದಲ್ಲಿ ಉಪಯೋಗಿಸಿದ ಕೆಲವು ಮತ್ಸರೋದ್ಗಾರ ಮಾತುಗಳಿಂದ ಕಂಡುಬರುತ್ತದೆ. ಇವರು ಹಾಯಿಯಾದರೂ ಅಡಿಕೋರಿಸುತ್ತಾರೆ. ಈ ಬಗೆಯ ಹೇಳುವ ಗದಗ ಶರಣ ಸೇವಕ ಸಂಘದ ಚಾಲಕರಾದ ಅ. ಮ. ಪಾಟೀಲರನ್ನು ತಿದ್ದುವದು ಬ್ರಹ್ಮನಿಂದಾದರೂ ಆಗದೆಂದು ಮಾತ್ರ ಹೇಳಬಲ್ಲೆ. ಆದರೆ ಯೋಗ್ಯಾಯೋಗ್ಯ ವಿಚಾರವನ್ನು ಮಾಡಬಲ್ಲ ಸಜ್ಜನರು ಪರೀಕ್ಷಿಸಿ, ಯಥಾರ್ಥವಿದ್ದರೆ ಒಪ್ಪಲೆಂದು ಪರಮೋತ್ಸಾಹದಿಂದ ಉಪನಿಷತ್ತು, ಭಾಷ್ಯ, ಸ್ಮೃತಿ, ವ್ಯಾಸಪ್ರಣೀತ ಪುರಾಣ, ಇತಿಹಾಸ, ನಿಜಗುಣ ಶಿವಯೋಗಿಗಳ ಗ್ರಂಥ, ಶತಕತ್ರಯ, ಬಸವಾದಿ ಪ್ರಮಥರ ವಚನ ಇತ್ಯಾದಿ ಪ್ರಬಲ ಪ್ರಮಾಣಗಳನ್ನು ಈ 'ಮಂತ್ರವಾದಿಗೆ ಮದ್ದು' ಎಂಬ ಗ್ರಂಥದಲ್ಲಿ ವೇ. ಕರವೀರ ಶಾಸ್ತ್ರಿಗಳು ತೋರಿಸಿ, ಅ. ಮ. ಪಾಟೀಲರ ಮಂತ್ರವಾದಿ ಗ್ರಂಥವನ್ನು ಖಂಡಿಸಿ ಬರೆದದ್ದು ಯೋಗ್ಯವಾದೆ.

ಗುಬ್ಬಿ ಮಲ್ಲಣಾರ್ಯರಿಂದ ವಿರಚಿತವಾದ ವೀರಶೈವಾಮೃತ ಮಹಾಪುರಾಣದ ೭ನೇ ಕಾಂಡ, ೩ನೇ ಸಂಧಿಯಲ್ಲಿ ಜಾತಿ, ವರ್ಣಾಶ್ರಮ, ಕುಲ ಗೋತ್ರ, ನಾಮ ಮುಂತಾದವು ಇರುವವೆಂದು ಸ್ಪಷ್ಟವಾಗಿ ಬರೆದಿದ್ದಾರೆ.

ಶ್ಲೋಕ: ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಶೂದ್ರಶ್ಚ ವ್ಯಾವಹಾರಿಕಃ । ಗೋಪಾಲಕಶ್ಶಿಲ್ಪಿಕಶ್ಚ ಸ್ವರ್ಣಕಾರ ಕುಲಾಲಕೌ ॥ ತಂತುವಾಯಶ್ಚ ವರಿಕ್ಚರ ಜಕೋವಸ್ತ್ರ ಛೇದಕಃ । ಚರ್ಮ ಖಂಡನ ಜಾತಿಶ್ಚತಿಲ ಘಾತಕಲುಬ್ಧಕೌ । ಚಾಂಡಾಲಶ್ಚೈವ ಮಾತಂಗಾ ವರ್ಣಾಹ್ಯಷ್ಟಾದಶ ಸ್ಮೃತಾಃ ॥ ೧ ।

ಹೀಗೆ (೧೮) ಬಣದವರುಂಟೆಂದು ಬರೆದಿರುವರು. ಇದು ಅಲ್ಲದೆ ಭಗವದ್ಗೀತೆಯಲ್ಲಿ:

ಶ್ಲೋಕ: ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ । ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ । ನರಕೇ ನಿಯತಂವಾಸೋಭವತೀತ್ಯನುಶುಶ್ರುಮ ॥

ಕುಲವನ್ನು ನಾಶಗೊಳಿಸುವ ಮತ್ತು ವರ್ಣಸಂಕರವನ್ನು ಮಾಡುವ ಈ ದೋಷಗಳಿಂದ ಶಾಶ್ವತವಾದ ಜಾತಿ ಧರ್ಮಗಳೂ ಕುಳಧರ್ಮಗಳೂ ನಾಶ ಹೊಂದುತ್ತವೆ. ಹೀಗೆ ಅರ್ಜುನನು ಕೇಳಿದನು. ಎಂದು ಹೇಳಿದೆ. 'ಸ್ವಧರ್ಮಂ ನ ತ್ಯಜೇತ್ಪ್ರಾಜ್ಞಃ ಕಾಯೇನ ಮನಸಾಗಿರಾ' ಬುದ್ಧಿವಂತನು ತನ್ನ ಧರ್ಮವನ್ನು ತ್ರಿಕರಣ ಪೂರ್ವಕವಾಗಿ ಬಿಡಕೂಡದು ಎಂದು ಶಾಂಕರ ಸಂಹಿತೆಯು— 'ಶಿವೋಕ್ತಾಂ ಜಾತಿ ಮರ್ಯಾದಾಂ ಯೋತೀತ್ಯ ಭುವಿವರ್ತತೇ । ಸಚಾಂಡಾಲ ಇತಿಜ್ಞೇಯಃ ಸರ್ವಕರ್ಮ ಬಹಿಷ್ಕೃತಃ' ಈ ಪ್ರಕಾರ ಶಿವನಿಂದ ಹೇಳಲ್ಪಟ್ಟ ಜಾತಿ ಮರ್ಯಾದೆಯನ್ನು ಯಾವನು ಅತಿಕ್ರಮಿಸಿ ವರ್ತಿಸುವನೋ? ಅವನು ಸರ್ವ ಕರ್ಮಗಳಿಂದಲೂ ಬಹಿಷ್ಕೃತನಾಗುವನು, ಅಂದರೆ ವರ್ತನ ಚಾಂಡಾಲನಾಗುವನು ಎಂದು ಪರಮಾತ್ಮನ ವಾಕ್ಯವಿದೆ.

ಮನುಷ್ಯನು ಈ ಜನ್ಮದಲ್ಲಿ ನೀಚ ವರ್ಣದಿಂದ ಉಚ್ಚವರ್ಣದವನಾಗಲಾರನು. ಆದರೆ ಭಕ್ತಿಪ್ರಭಾವದಿಂದ ಶಿವಭಕ್ತಿ ಪ್ರಾಪ್ತವಾಗಿ ಸರ್ವಪೂಜ್ಯ ಶರಣನಾಗಬಲ್ಲನು. ಸಾಮಾಜಿಕ ಸಮ್ಮಂಧವೇ ಬೇರೆ, ಮತ್ತು ಪರಮಾತ್ಮನೊಡನೆ ಇರುವ ಜೀವದ ಆತ್ಮೀಯ ಸಮ್ಮಂಧವೇ ಬೇರೆಯಾಗಿದೆ. ಈ ಆತ್ಮೀಯ ಸಮ್ಮಂಧವು ಎಲ್ಲರಿಗೂ ಇದೆ. ಯಾರು ಈ ಸಮ್ಮಂಧವನ್ನರಿತುಕೊಂಡು ಗುರುಲಿಂಗಜಂಗಮರನ್ನು ತನ್ನ ಸುಹೃದಯ ಪರಮೋಪಾಸ್ಯ ಪರಮಗತಿ, ಪರಮಾಶ್ರಯ, ಪರಮಧನ ಮತ್ತು ಪರಮ ಪಿತರೆಂದು ತಿಳಿದುಕೊಳ್ಳುವರೋ? ಅವರೇ ಶಿವಭಕ್ತರು. ಇಂಥವರು ಯಾವ ಜಾತಿಯವರೇ ಆಗಲಿ, ಯಾವ ಕಾಯಕವನ್ನೇ ಮಾಡುತ್ತಿರಲಿ; ಅವರು ತಮ್ಮ ಜಾತಿಯಲ್ಲಿದ್ದು

ಕೊಂಡು ತಮ್ಮ ಕಾಯಕವನ್ನು ಮಾಡುತ್ತಲೇ ಗುರುಲಿಂಗಜಂಗಮರನ್ನೋಲೈಸುವರೋ? ಅವರಿಗೆ ಜಾತಿ ಅಥವಾ ಕಾಯಕವನ್ನು ಬದಲಿಸುವ ಅವಶ್ಯಕತೆಯಿಲ್ಲ ಅಂತಹ ಬಸವಾದಿ ಪ್ರಮಥರ ಈ ವಚನಗಳೇ ಸಾಕ್ಷಿಯಾಗಿವೆ.

ಜೇಡರ ದಾಸಿಮಯ್ಯನವರ ವಚನ:

ವಚನ: ಉಂಡೆಯ ನಿಗುಚಿ ಸರಿಗೆಯ ಸಮಗೊಳಿಸಿ ಸಮಗಾಲನಿಕ್ಕಿ ಅಣಿಯೊಳು ಸುತ್ತಿದರೆ . ಓಡಿದ ಲಾಳಿಯ ಮುಳ್ಳು ಕಂಡರೆ ನುಂಗಿತ್ತು ಈ ಸೀರೆಯ ನೇಯ್ದವನಾರೋ? ನೀನೋ? ರಾಮನಾಥ ॥ ೧ ॥

ಹೆಂಡದ ಮಾರಯ್ಯನವರ ಹೆಸರು ಸೂಚಿಸುವ ವಚನ:

ವಚನ: ಹುಟ್ಟಿನ ಸುರೆಯ ತೊಗಲಿತಿತ್ತಿಯಲ್ಲಿ ತುಂಬಿ ಒಟ್ಟಿದಲ್ಲಿ ನಿಲಿ ನಿಲಿಕದು ತನ್ನ ಉತ್ಪಾತದಿಂದ ತಿತ್ತಿಹಾರಿ ನೆಲಕ್ಕಪ್ಪಳಿಸಿ ಬೀಳುವದು ಕಂಡೆ! ದೃಷ್ಟದ ಕೇಳಲೀತಕ್ಕೆ ಕಾಯಕದ ತಿತ್ತಿಯಲ್ಲಿ ಜೀವಹೊಕ್ಕು ತ್ರಿವಿಧ ಮಲದ ಕಷ್ಟ ನಡೆವುದಕೆ ಕಾಲಿಲ್ಲದೆ ನುಡಿವುದಕೆ ಬಾಯಿಲ್ಲದೆ ನೋಡಲಿಕ್ಕೆ ಕಣ್ಣಿಲ್ಲದೆ ಮರೆಯಾಗಿತ್ತು ಬೊಂಬೆ ಹೋಯಿತ್ತು! ದೃಷ್ಟಾಂತದ ಬೊಂಬೆ ಕಟ್ಟಲ್ಲಿ ಮಣ್ಣಿಗೆ ಕಾದಿ ಹೊನ್ನಿಗೆ ಹೋದೀ ಹೆಣ್ಣಿಗೆ ನಾಣುಗೆಟ್ಟೆ ಈ ಕುನ್ನಿಮನಕೇನೆನ್ನುವೆ ಧರ್ಮೇಶ್ವರಾ ॥ ೨ ॥

ಇನ್ನು ಮಾದರ ಧೂಳಯ್ಯ ಚಮ್ಮಾರ ಈತನು ತನ್ನ ಕಾಯಕದ ವೃತ್ತಿಗನುಗುಣವಾಗಿ ಹಾಡಿದ ವಚನ:

ವಚನ: ಕಟ್ಟಿದೆ ಘಟಚಟ್ಟಿಯ ಹೊಲಿದು ಇಕ್ಕಿದೆ ಚತುರ್ವಿಧದ ನಾಲ್ಕುಂಗುಟವ ಬಲಿದುಂಗುಟದ ದಾರದಲ್ಲಿ ಪಂಚದ ಬಾರು ತೆಗೆದು ತೊಡಕು ಬಂಧನವನಿಕ್ಕಿ ಅಡಿಯ ಬಿಡದಂತೆ ಹಿಂದಿನ ಮಡಮುಂದಣ ಉಂಗಷ್ಟಕ್ಕೆ ಒಂದನ್ನೊಂದು ಜಾರದಂತೆ ಬಂಧಿಸಿ ಸಕಲೇಂದ್ರಿಯವೆಂಬ ಉಭಯದ ಸಂದಿಸಿ ಕುಣಿಕೆಯ ನಿಕ್ಕಿ ಕಾಮದ ಒಡಲ ಮಾದಿಗ ಬಂದ ಘಟ ತೋಕುಳ ತೊಗಲು ಹದ ಬಂದಿತ್ತು ಹೊತ್ತು ಹೋದೀತಣ್ಣ ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ ಒಪ್ಪಿದರಿರಲಿ ಒಪ್ಪದಿರ್ದಡೆ ಮರುಮುಖದಪ್ಪದಕೊಟ್ಟಿಹ ತಪ್ಪಡಿಯ ಮೆಟ್ಟಿ ಹೋಗುತ್ತಿದ್ದೇನೆ ಚನ್ನಯ್ಯಪ್ರಿಯ ಧೂಳಿನ ಧೂಳಿಗೊಳಗಾಗಿ ॥ ೧ ॥

ಈ ಪ್ರಕಾರ ಬಸವಾದಿ ಪ್ರಮಥರು ಪಾಟೀಲರಂತೆ ಗುರುಜಂಗಮರಾಗಬೇಕೆಂಬ ಉದ್ದೇಶವಿಲ್ಲದೆ, ತಮ್ಮ ಕುಲದ ಕಾಯಕ ಸಾಗಿಸುತ್ತ ಅದರಲ್ಲೇ ಪಾರಮಾರ್ಥವನ್ನು ಕಂಡ್ಹಿಡಿದು ತನು–ಮನ–ಧನ, ಸಕಲೇಂದ್ರಿಯ ಗುಣಗಳನ್ನು ನೀಗಿ, ಪರಂಜ್ಯೋತಿ ಸ್ವರೂಪಿ ಗುರುಲಿಂಗಜಂಗಮವನ್ನು ಅರ್ಚಿಸಿ, ಪೂಜಿಸಿ, ಸೇವಿಸಿ ಅಜರಾಮರರಾಗಿ ಈಗಲೂ ತಮ್ಮ ಸಚ್ಚರಿತ್ರವನ್ನು ಜಗತ್ತಿನ ಕಲ್ಯಾಣಕ್ಕಾಗಿ ಕಾಣಿಕೆಯನ್ನು ದಯಪಾಲಿಸಿದ್ದಾರೆ. ಇವರೇ ನಿಜವಾದ ಶರಣರಲ್ಲವೇ ?

ಶ. ಮ. ಪಾಟೀಲರ ತಾಯಿ-ತಂದೆಗಳು ಇಲ್ಲಿಯ ಪರ್ಯಂತರ ಅವಿಚಿನ್ನಾದಿಯಿಂದ ಇಷ್ಟ ಗುರುಜಂಗಮರನ್ನು ಪೂಜಿಸುತ್ತ ಬಂದು 'ವಿಸಕೇನ ಪ್ರಕಾರೇಣ ಪ್ರಸಿದ್ಧ ಪುರುಷೋಭವತಿ' ಎಂಬ ಗಾದೆಗನುಸಾರವಾಗಿ ಪಾಟೀಲರು ಹೊಸ ಅವತಾರಿ ಪುರುಷರಾಗಲು ಈಗ ಮಾತ್ರ ಕ್ರಮತಪ್ಪಿ ನಡೆಯಲಿಕ್ಕೆ ಹತ್ತಿದ್ದಾರೆ. 'ಕ್ರಮತಪ್ಪಿ ನಡೆವದರಿಂದ ಕಷ್ಟಮುನ್ನುಂಟೇ' ಎಂಬುದನ್ನು ನಿಜಗುಣ ಶಿವಯೋಗಿಯು ತಮ್ಮ ಕೈವಲ್ಯ ಪದ್ಧತಿಯಲ್ಲಿ ಹೇಳಿದ್ದಾರೆ. ಇದೆಲ್ಲವನ್ನು ತಿಳಿದೂ ತಿಳಿದೂ 'ಹಗಲು ಕಂಡ ರಾತ್ರಿ ಬಾವಿ ಬೀಳುವಂತೆ' ವೀರಶೈವರಿಗೆ ವರ್ಣಾಶ್ರಮ ಧರ್ಮಗಳೇ ಇಲ್ಲ; ಅತಿ ವರ್ಣಾಶ್ರಮಿಗಳು ಯಾರೆಂದು ತಿಳಿಯದೆ, ಬರೆದಿರುವ 'ಮಂತ್ರವಾದಿ' ಎಂಬ ಗ್ರಂಥವು ತತ್ವಜ್ಞರ ಮುಂದೆ ಓಡಬಲ್ಲುದೇ ? ಕೀರ್ತಿ, ಲಾಭಾದಿಗಳಿಗಾಗಲಿ, ಗ್ರಂಥ ಬರೆಯುವ ಮನಸ್ಸಿನ ಉಬ್ಬಿಗಾಗಲಿ ಬರೆದಿದ್ದರೂ ಬರೆದಿರಬಹುದು. ಅದರೊಳಗೆ ಕೆಲಕೆಲವೆಡೆಗಳಲ್ಲಿ ಗುರುಸ್ಥಾನಗಳಲ್ಲಿ ಭಕ್ತರನ್ನು ಭಕ್ತರ ಸ್ಥಾನದಲ್ಲಿ ಜಂಗಮರನ್ನೂ ಸೇರಿಸಿ ಬರೆದ ಮತ್ಸರೋದ್ಗಾರವು ಅವರ ಕಾಪಟ್ಯದ ಚೇಷ್ಟೆಯನ್ನು ಬೈಲಿಗಿಟ್ಟು ಬರೆದಿರುವ "ಮಂತ್ರವಾದಿ" ಎಂಬ ಅಲ್ಪವಿಚಾರದ ರೋಗಕ್ಕೆ ವೇ. ಕರವೀರ ಶಾಸ್ತ್ರಿಗಳು ಸಿದ್ಧೌಷಧ ರೂಪ ಮದ್ದನ್ನು ಗ್ರಂಥರೂಪದಲ್ಲಿ ಸಿದ್ಧಗೊಳಿಸಿದ್ದು ಸಮಯೋಚಿತವೂ ಸೂಕ್ತವೂ ಆಗಿದೆ.

**ಶ್ರೀ ಶಿವಮೂರ್ತಿ ಸ್ವಾಮಿಗಳವರು ವಿರಕ್ತಮಠ**

ತಾ. ೧೧–೩–೧೯೫೬ ಮುನವಳ್ಳಿ.

# ಕೆಲ ಮಹನೀಯರ ಅಭಿಪ್ರಾಯಗಳು

೧

ವೇ|| ಕರವೀರ ಶಾಸ್ತ್ರಿಗಳು ರಚಿಸಿದ ಮಂತ್ರವಾದಿಗೆ ಮದ್ದಿಂಬ ಈ ಕನ್ನಡ ಗ್ರಂಥವನ್ನು ಪರಿಶೀಲಿಸಿದೆನು. ವೀರಶೈವ ಮತ ಉತ್ಪತ್ತಿ ಅಷ್ಟಾವರ್ಣಗಳಲ್ಲಿಯ ಗುರುಜಂಗಮರೇ ಪಂಚಪರಂಪರ ಪೂಜ್ಯ ವಸ್ತುಗಳೆಂದು ಈ ವಿಷಯದಲ್ಲಿ ಅನೇಕ ಪಂಡಿತರ ವಿಮರ್ಶಾತ್ಮಕ ಗ್ರಂಥಗಳ ಪರಿಶೋಧನೆಯಿಂದ ಸಂಯುಕ್ತವಾಗಿ ವಿವರಿಸಲ್ಪಟ್ಟಿದ್ದಾಗಿರುವದು. ಆದರೆ ನಮ್ಮ ಸಮಾಜದಲ್ಲಿಯ ಹಲವಾರು ತೊಂದರೆಗಳನ್ನು ಇದಿರಿಸುವ ಸಮಸ್ಯೆಗಳು ಪ್ರತಿಯೊಬ್ಬ ಸಾಮಾಜಿಕನಿಗೆ ಸಹಜವಾಗಿ ಬರುತ್ತವೆ. ಅದಕ್ಕೆ ಯಾರು ಹೊಣೆಗಾರರೆಂಬುದನ್ನು ನಿರ್ಣಯಿಸುವದು ಕಷ್ಟಕರವಾಗಿದೆ. ಅದರಲ್ಲಿಯ ಒಂದರ ಹೊಣೆಯನ್ನು ಇದಿರಿಸಲು ನಮ್ಮ ಪಂ|| ಕರವೀರ ಶಾಸ್ತ್ರಿಗಳು ಗೊಂದಿಮಠ ಇವರು ಸಿದ್ಧರಾದದ್ದು ಅನಿವಾರ್ಯವಾಗಿದೆ. ಅದೂ ಒಂದು ದೃಷ್ಟಿಯಲ್ಲಿ ಪ್ರಶಂಸನೀಯವಾಗಿದೆ. ಆದರೆ ಪ್ರತಿಯೊಬ್ಬ ಸಾಮಾಜಿಕನು ಶರಣರ ಮಾರ್ಗವನ್ನರಿಯದೆ ಆಚರಿಸುತ್ತಿರುವದು ಸಮಾಜಕ್ಕೆ ಘಾತುಕವಾಗಿದೆ. ಈ ಘಾತುಕತನವನ್ನು ದೂರೀಕರಿಸಲು ಪ್ರತಿಯೊಬ್ಬನಿಗೂ ಆತ್ಮನಿರೀಕ್ಷಣೆಯು ಅವಶ್ಯವಾಗಿದೆ. ಆ ಮಾರ್ಗದಲ್ಲಿ ಈ ಗ್ರಂಥವು ಮಾರ್ಗದರ್ಶಿಯಾಗಬಹುದೆಂದು ನಿರೀಕ್ಷಿಸುತ್ತೇನೆ.

ಮುಧೋಳ

೩೧—೧೨—೫೭ ಮೃತ್ಯುಂಜಯ ಸ್ವಾಮಿಗಳು ಕಿರೀಟಿಮಠ

ವೇ|| ಕರವೀರ ಶಾಸ್ತ್ರಿಗಳು ಗೊಂದಿಮಠ ಮು|| ಚನ್ನೂರು ಇವರು ಕಳುಹಿಸಿ ಕೊಟ್ಟ ಮಂತ್ರವಾದಿಗೆ ಮದ್ದಿಂಬ ಗ್ರಂಥವನ್ನು ಸಂಪೂರ್ಣ ಓದಿ ನೋಡಿದೆನು. ನಮ್ಮ ವೀರಶೈವ ಅನೇಕ ಪಂಡಿತರ ವ ಸರ್ವ ಭಕ್ತರ ತಲೆ ತಿನ್ನುತ್ತಿದ್ದ ಮಂತ್ರವಾದಿಯ ಪ್ರಶ್ನೆಗಳನ್ನು ಬಹು ಸರಳವಾಗಿ ಬಿಡಿಸಿದ್ದಾರೆ. ಇವರ ಬಿಡಿಸುವಿಕೆಯಲ್ಲಿ ತಮ್ಮ ಕೈವಾಡವಿಲ್ಲದೆ ಪ್ರತಿ ಪ್ರಶ್ನೆಗೂ ಪ್ರಮಾಣಗಳನ್ನು ಕೊಟ್ಟು ಬರೆದಿರುವರು. ಇದು ಪಂಡಿತ ಪಾಮರರಿಗೂ ಅರ್ಥವಾಗುವಂತಿದೆ.

ಇವನ್ನು ಸರಳ ಶೈಲಿಯಲ್ಲಿ ಖಂಡಿಸಿರುವದು ಸಣ್ಣ ಮಾತಲ್ಲ. ಇದಕ್ಕೆ ಶಾಸ್ತ್ರಾಭ್ಯಾಸ, ಅನುಭವ ಎರಡೂ ಬೇಕು. ಇವರು ಮಂತ್ರವಾದಿಯನ್ನು ಖಂಡಿಸುವಲ್ಲಿ ಅದ್ಭುತ ವಿಜಯವನ್ನು ಸಂಪಾದಿಸಿದ್ದಾರೆ. ವೀರಶೈವ ಶಾಸ್ತ್ರ ಬಲ್ಲವರು ಬಹು ಕಡಿಮೆ. ಶ್ರೀ ಕರವೀರ ಶಾಸ್ತ್ರಿಗಳು ಹಳಬರಾದರೂ ಆಧುನಿಕ ಮಂತ್ರವಾದಿಯ ಅಸಂಬದ್ಧವಾದ ಪ್ರಶ್ನೆಗಳಿಗೆ ವೇದಾಗಮ ಪುರಾಣಗಳ ಮತ್ತು ಬಸವಾದಿ ಪ್ರಮಥರ ವಚನಗಳನ್ನು, ಮೈಲಾರ ಬಸವಲಿಂಗ ಶರಣರ ಕೃತಿಗಳ ಆಧಾರಗಳನ್ನು ಬಹು ಸಮಂಜಸವಾಗಿ ಹೊಂದಿಸಿ ಆಧುನಿಕ ಮಂತ್ರವಾದಿಯ ಅಯ್ಯನವರ ಮೇಲಿದ್ದ ವಕ್ರದೃಷ್ಟಿಯನ್ನು ಸರಿಪಡಿಸಿ ಖಂಡಿಸಿರುವರು. ವೀರಶೈವ ಅಷ್ಟಾವರ್ಣಾಂತರ್ಗತರಾದ ಗುರುಜಂಗಮರನ್ನು ಸಂಸ್ಕಾರ ಮಾಡಿ, ಬೇರಾದ ಜಾತಿಯವರನ್ನು ಈ ಪೂಜೆಯ ಸ್ಥಾನಕ್ಕೆ ತರಲಿಕ್ಕೆ ಬರುವದಿಲ್ಲೆಂದು ವೀರಶೈವ ಶಾಸ್ತ್ರ ಸಿದ್ಧಾಂತವನ್ನು ನಿರ್ಭಯ, ನಿರ್ಮಾತ್ಸರ್ಯಗಳಿಂದ ಬರೆದಿದ್ದಾರೆ. ವೀರಶೈವ ಭಕ್ತಾದಿಗಳಿಗೂ ಪರಮತ ಪಂಡಿತರಿಗೂ ಅಷ್ಟಾವರ್ಣ ಪೂಜ್ಯ ಸ್ಥಾನ ಅರಿಯಲು ಮಂತ್ರವಾದಿಗೆ ಮದ್ದೆಂಬ ಗ್ರಂಥವು ಕೈದೀವಟಿಗೆಯಾಗಿದೆ.

ವೀರಶೈವರ ಇತಿಹಾಸವನ್ನು ತಿಳಿಯುವವರಿಗೆ ಇದು ಮಾರ್ಗದರ್ಶಿಯಾಗಿದೆ. ವೀರಶೈವ ಸಿದ್ಧಾಂತ ಪ್ರಚಾರಕ್ಕೆ ಇದು ಆಧಾರ ಗ್ರಂಥವಾಗಿದೆ ಎಂದು ಬರೆಯಲು ಸಂತೋಷವಾಗುವದು. ಸದರಿ ಶಾಸ್ತ್ರಿಗಳು ಈ ಗ್ರಂಥ ರಚನೆ ಮಾಡಿ ಶ್ರಾವಣ ಮಾಸದಲ್ಲಿ ಪುರಾಣ ಸಮಾಪ್ತಿ ಕಾಲದಲ್ಲಿ ಭಕ್ತ ಹರಗುರು ಚರಮೂರ್ತಿಗಳಿಂದ ಹೊಸಮಠದಲ್ಲಿ ಹಾವೇರಿ ಹುಕ್ಕೇರಿ ಮಠದ ಶ್ರೀ ಶಿವಬಸವ ಸ್ವಾಮಿಗಳ ಪುಣ್ಯ ತಿಥಿಗೆ ತರಲು ಅಲ್ಲಿ ಕೂಡಿದ ಹರಗುರು ಚರಮೂರ್ತಿಗಳಿಂದಲೂ ಪಂಡಿತ ಶಾಸ್ತ್ರಿಗಳು ಹಾಗೂ ಭಕ್ತರ ಸಮೂಹದಿಂದಲೂ ಆಲೋಚಿಸಿ, ಒರೆಗೆ ಹಚ್ಚಿ ಮಂತ್ರವಾದಿಗೆ ಮದ್ದೆಂಬ ಗ್ರಂಥವು ಅಮೌಲ್ಯವೆಂದ ಮೇಲೆ ಈ ಗ್ರಂಥವನ್ನು ಅಚ್ಚು ಮಾಡಿಸಿ ಕರ್ನಾಟಕ ರಂಗಭೂಮಿಯಲ್ಲಿ ಹೊರಗೆಡವಿದರೆ ಸಮಸ್ತ ಭಕ್ತಾದಿಗಳು ಈ ಗ್ರಂಥವನ್ನು ಸಂಗ್ರಹಿಸಿ, ಶಾಸ್ತ್ರಿಗಳ ಶ್ರಮವನ್ನು ಸಾರ್ಥಕಗೊಳಿಸಬೇಕೆಂದು ಬೇಡುವೆ.

ಅಗ್ರಿಕಲ್ಚರ ಕಾಲೇಜ,
ಹೆಬ್ಬಾಳ. ಬೆಂಗಳೂರ.

**ಎಚ್. ವ್ಹಿ. ದೇವಧರಪ್ಪಗೌಡಾ**
II ಬಿ. ಎಸ್. ಸಿ. (ಏಜಿ)

೩

ವೇ॥ ಪಂ॥ ಕರಿಬಸವ ಶಾಸ್ತ್ರಿಗಳು ಗೋಂದಿಮಠ ಸಾ॥ ಚನ್ನೂರು ಇವರು ಗದಗ ಕರಣಕೇಸರಿ ಸಂಘದ ಅ. ಮ. ಪಾಟೀಲ ಬರೆದ ಮಂತ್ರವಾದಿ ಗ್ರಂಥಕ್ಕೆ ಪ್ರತ್ಯುತ್ತರವಾಗಿ ಬರೆಯಲ್ಪಟ್ಟು, ಮತ್ತು ಗ್ರಂಥವು ನಿಜವಾದ ವೀರಶೈವ ಮಹತ್ವದ ವಿಚಾರವನ್ನು ತಿಳಿದ ಮಹನೀಯರು ಶ್ರೀ ಶಾಸ್ತ್ರಿಗಳು ಬರೆದ ಗ್ರಂಥಕ್ಕೆ ವಿಶೇಷವಾಗಿ ಪ್ರಶಸ್ತಿಕೆಯನ್ನು ಕೊಡಲ್ಪಟ್ಟಿರುತ್ತದೆ. ಅಂದರೆ ಮುಖ್ಯವಾಗಿ ವೀರಶೈವರ ಉದ್ದೇಶ ವೀರಶೈವ ಸಮಾಜವು ಶ್ರೀಜಗದ್ಗುರು ಪಂಚಾಚಾರ್ಯರಿಂದ ಸ್ಥಾಪಿತವಾಗಿ ಶ್ರೀಬಸವಾದಿ ಪ್ರಮಥರಿಂದ ಪ್ರಾಧಾನ್ಯತೆಗೆ ಬಂದ ವಿಷಯವು ಅತ್ಯಂತ ಮಹತ್ವದ್ದಾಗಿದೆ. ಆದರೆ ಈ ಪ್ರಸಿದ್ಧಿ ಪಡೆದ ಸಮಾಜವನ್ನು ಪಾಪದೃಷ್ಟಿಯಿಂದ ನೋಡುವವರು ಮಾನವರೋ ಅಥವಾ ದಾನವರೋ ತಿಳಿಯದಾಗಿದೆ. ಅವರು ಮಾನವರಾಗಿದ್ದರೆ, ಪವಿತ್ರ ಸಮಾಜವನ್ನೂ ಶಿವಶರಣರ ಮಹತ್ವವನ್ನೂ ಎಂದೂ ಅಲ್ಲಗಳೆಯಲಾರರು. ಸದ್ಯಕ್ಕೆ ಹೊಸದಾಗಿ ಜಂಗಮರಾಗಬೇಕೆಂಬ ಅಭಿಲಾಷೆಯುಳ್ಳ ಮಂತ್ರವಾದಿ ಅ. ಮ. ಪಾಟೀಲರು ಈ ಹಿಂದೆ ವಿವಾಹ ವಿಮರ್ಶೆಯೆಂಬ ಗ್ರಂಥ ಬರೆದಿರುವರು. ಆ ಗ್ರಂಥಕ್ಕೆ ಅಜ್ಞ ಜನರು ಮಹತ್ವ ಕೊಟ್ಟಂತೆ ಸುಜ್ಞರು ಎಂದೂ ಅಭಿಪ್ರಾಯ ಕೊಡಲಾರರು. ಮಂತ್ರವಾದಿಗೆ ಮದ್ದು ಎಂಬ ಗ್ರಂಥ ಬರೆದ ವೇ॥ ಪಂ॥ ಕರವೀರ ಶಾಸ್ತ್ರಿಗಳು ಗುರುಸ್ಥಲದವರಿದ್ದು ವಿದ್ಯಾವಂತರು ಲಿಂಗದಲ್ಲಿ ನಿಷ್ಠಾವಂತರು ಕರುಣಾ ಹೃದಯದವರೂ ವೀರಶೈವ ಧರ್ಮನಿರತರೂ "ದುರ್ಜನೋಹತಃ" ಎಂಬಂತೆ ಈಗಿನ ಜನಗಳನ್ನು ದುರ್ಬೋಧನೆಗಳಿಂದ ಮನವೆಳಿಸಿ ದ್ರವ್ಯ ಸೆಳೆದು ಸುಖ ವಿಲಾಸವನ್ನು ಭೋಗಿಸು. ಆಧುನಿಕ ನಮ್ಮ ಜನಗಳು ಜಾಗ್ರತರಾಗಿ ಪವಿತ್ರ ವೀರಶೈವ ಸಮಾಜವನ್ನು ರಕ್ಷಣೆ ಮಾಡಿರಿ. ಗುರುಲಿಂಗ ಜಂಗಮ ಸ್ಥಾನಕ್ಕೆ ಪ್ರಾಧಾನ್ಯತೆ ಕೊಟ್ಟಿರುವ ಭೀಮಕವಿಗಳು ಶ್ರೀ ಬಸವೇಶ್ವರ ಪುರಾಣ ಬರೆದು ಜಗದ್‌ಜಾಗ್ರತಗೊಳಿಸಿದ್ದಾರೆ. "ರೇಣುಕ ವಿಜಯ" ಗ್ರಂಥವನ್ನು ಪಂ॥ ಕಾಶೀನಾಥ ಶಾಸ್ತ್ರಿಗಳು ರಚಿಸಿ ವೀರಶೈವ ಧರ್ಮಕ್ಕೆ ಮನ್ನಣೆಯನ್ನು ಇತ್ತು ಅಲ್ಲದೆ ಶ್ರೀ ಷಡಕ್ಷರ ದೇವರು ರಾಜಶೇಖರ ವಿಳಾಸ, ವೃಷಭೇಂದ್ರ ವಿಜಯ, ಶಬರ ಶಂಕರ ವಿಳಾಸ ಇನ್ನೂ ಅನೇಕ ವೀರಶೈವ ಸಮಾಜದ ಗ್ರಂಥವನ್ನು ಬರೆದು ಮಾನವ ಜನಾಂಗವನ್ನು ಜಾಗ್ರತಗೊಳಿಸಿದ್ದಾರೆ.

ಹೀಗಿದ್ದು ಜಂಗಮನಲ್ಲದೆ ಅನಾಧಿಕಾರಿಯಾದ ಅ. ಮ. ಪಾಟೀಲರು ಇನ್ನು ಮೇಲಾದರೂ ವಿಚಾರವಂತರಾಗಿ ಗುರು ಸೇವಾತತ್ಪರರಾಗಿ ಮನಶ್ಶುದ್ಧಿ ಮಾಡಿ ಕೊಳ್ಳುವರಾಗಿ ವಿನಂತಿ.

ವೇ॥ **ಈಶ್ವರಯ್ಯಶಾಸ್ತ್ರಿ ಬಸವರಾಜ ಹಿರೇಮಠ.**
ನರಗುಂದ

ವೇ॥ ಪಂ॥ ಕರವೀರ ಶಾಸ್ತ್ರಿಗಳು ಪ್ರಶ್ನೋತ್ತರವಾಗಿ ಖಂಡಿಸಿದ ಮಂತ್ರ ವಾದಿಗೆ ಮದ್ದೆಂಬ ಗ್ರಂಥವನ್ನು ಕಳಿಸಿದ್ದು ಸಂಪೂರ್ಣವಾಗಿ ಓದಿ ನೋಡಿ ದೆನು. ·ಇದನ್ನು ಇದೇ ಕ್ರಿಸ್ತಶಕದ ೧೯೫೬ನೇ ಶತಮಾನದಲ್ಲಿ ಬರೆದ ಮಂತ್ರ ವಾದಿ ಪ್ರಶ್ನೆ ಅದಕ್ಕೆ ಸರಿಯಾಗಿ ಅನಂತ ವೀರಶೈವ ಮತ ಗ್ರಂಥಗಳ ಮತ್ತು ಬಸವಾದಿ ಪ್ರಮಥರ ವಚನಗಳ ಆಧಾರವಾಗಿಟ್ಟುಕೊಂಡು ಖಂಡಿಸಿದ ಮಂತ್ರ ವಾದಿಗೆ ಮದ್ದೆಂಬ ಗ್ರಂಥವು ಆಧುನಿಕವಾದರೂ ಪ್ರಾಚೀನ ಗ್ರಂಥಗಳ ಶ್ರೇಣಿ ಯಲ್ಲಿ ಪರಿಗಣಿಸಲು ಅರ್ಹವಾಗಿರುವದು. ಪಂಚಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಅಷ್ಟಾವರ್ಣಾಂತರ್ಗತರಾದ ಗುರುಜಂಗಮರೇ ವೀರಶೈವ ಮತದ ಅಗ್ರವರ್ಣ ದವರು. ಇವರು ಸಾಮಾನ್ಯವಾದ ಬ್ರಾಹ್ಮಣ ನಾಮವನ್ನು ಹೇಳಿಕೊಂಡರೆ, ಅನಿತ್ಯವಾದ ಸ್ವರ್ಗಭೋಗಕ್ಕಾಗಿ ಯಜ್ಞದಲ್ಲಿ ಪಶು ಹಿಂಸೆ ಮಾಡುವವರೆಂಬ ಭಾವನೆ ಜನರಿಗುಂಟಾದೀತೆಂದು ನೆನಸಿ, ಈ ಬ್ರಾಹ್ಮಣ ನಾಮವನ್ನು ತೆಗೆ ದೊಗೆದು ಗುರುಸ್ಥಲದವರೆಂಬ ಶ್ರೇಷ್ಠ ತರದ ಹೆಸರನ್ನು ಬಳಕೆಯಲ್ಲಿ ತಂದರು. ಲಿಂಗಧಾರಿಗಳಲ್ಲಿ ಬ್ರಾಹ್ಮಣಾದಿ ವೃತ್ತಿಗಳೆಲ್ಲವು ಇರುವದರಿಂದ ಬ್ರಾಹ್ಮಣ ಜಾತಿ ಯವರೇ ಲಿಂಗಧಾರಿಗಳಾದರೆಂಬರ್ಥ ಸ್ಪಷ್ಟವಾಗುತ್ತದೆ ಈ ವಿಷಯದಲ್ಲಿ.

**ಶ್ಲೋಕ :** ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾಯೇ ಚಾನ್ಯ ಜಾತಯಃ । ಲಿಂಗ ಧಾರಣ ಮಾತ್ರೇಣ ಶಿವಾ ಏವನ ಸಂಶಯಃ ॥ ವೇದೇಷು ಶಾಸ್ತ್ರ ಸಂಘೇಷು ಪುರಾಣೇಷ್ವಾಗಮೇಷ ಚ । ಲಿಂಗ ಧಾರಣ ಮಾಖ್ಯಾತಂ ಬ್ರಾಹ್ಮಣಸ್ಯ ವಿಶಿಷ್ಟಯಾತ್ । ಮುಖೇ ಮಂತ್ರೋ ಹೃದಿಧ್ಯಾನಂ ಮಸ್ತಕೇ ಲಿಂಗ ಧಾರಣಂ । ಶಿಖಾರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ ॥

ಎಂದು ಪಾರಮೇಶ್ವರಾಗಮ ಲೈಂಗೆ ಪುರಾಣ, ಗೌತಮ ಸ್ಮೃತಿ ಮೊದಲಾದ ಅನೇಕ ಪ್ರಮಾಣಗಳಿವೆ. ರೇಣುಕಾಚಾರ್ಯರ ವ ಬಸವೇಶ್ವರನ ಕಾಲಕ್ಕೆ ಕೆಲ ಬ್ರಾಹ್ಮಣರು ಲಿಂಗಧಾರಣ ಮಾಡಿಕೊಂಡಾಗ್ಯೂ ತಂತುಮಯವಾದ ಯಜ್ಞೋಪವೀತಕ್ಕೆ ಲಿಂಗವನ್ನು ಕಟ್ಟಿಕೊಂಡು ಸಂಧ್ಯಾವಂದನಾದಿಗಳನ್ನು ಬಿಟ್ಟರೆ ಬ್ರಾಹ್ಮಣ್ಯವು ಹೋಗುವದೆಂದು ಭ್ರಾಂತಿಯಿಂದ ಲಿಂಗಧಾರಣ ವ್ರತಕ್ಕೆ ವಿರುದ್ಧವಾದ ಸಂಧ್ಯಾವಂದನಾದಿಗಳನ್ನು ಆಚರಿಸುತ್ತಾ ಆರಾಧ್ಯ ಬ್ರಾಹ್ಮಣರೆಂದು ಹೇಳಿಕೊಳ್ಳುತ್ತಾ ಇರುವ ಅಂಥವರನ್ನು ಮೈಸೂರ ಸೀಮೆಯಲ್ಲಿ ಕಾಣಬಹುದು. ವೀರಶೈವ ಬ್ರಾಹ್ಮಣ್ಯವು ಲಿಂಗರೂಪವಾದ ಯಜ್ಞೋಪವೀತವನ್ನು ಧರಿಸುವ ಗಣವಂಶಜ ಬ್ರಾಹ್ಮಣರಿಗೆ ಹೊರತು ಆರಾಧ್ಯ ಬ್ರಾಹ್ಮಣರಿಗೆ ಅನ್ವಯಿಸುವದಿಲ್ಲ.

ಶ್ಲೋಕ : ಅಪೌವರ್ಣಾಶ್ರಮಾಚಾರೋ ಗುರೌ ಬ್ರಹ್ಮಜ್ಞತಾಸ್ತಿ ಚೇತ್ ॥
ಭಜೇತ್ತಮೇವ ಯತ್ನೇನ ನೋಚೇದನ್ಯ ಗುರುಂ ವ್ರಜೇತ್ ॥

ಶಿಷ್ಯನು ಪ್ರಥಮದಲ್ಲಿ ವರ್ಣಾಶ್ರಮಾಚಾರವು ಗುರುವಿನಲ್ಲಿದ್ದು ಬ್ರಹ್ಮಜ್ಞತೆಯೂ ಇದ್ದರೆ ಅಂತಹ ಗುರುವನ್ನೇ ಯತ್ನಪೂರ್ವಕವಾಗಿ ಹೊಂದಬೇಕೆಂದು ನಿರೂಪಿತವಾಗಿದೆ. ಆದಕಾರಣ ನಿಗಮಾಗಮ ರಹಸ್ಯವಾದ ಕ್ರಿಯಾಸಾರದಲ್ಲಿ ವರ್ಣಾಶ್ರಮ ಕ್ರಿಯಾನಿಷ್ಠೋ ಧರ್ಮ ವಿಜ್ಞಾಸ್ತ್ರ ಕೋವಿದಃ ॥ ಕ್ರಿ. ಸಾ. ಎ. ೭೫, ಶ್ಲೋ ॥ ೧೭. ಗುರುವಾದಾತನು ವರ್ಣಾಶ್ರಮ ಕ್ರಿಯಾನಿಷ್ಠನೇ ಇರಬೇಕೆಂಬುದು ಇದರಿಂದ ವೀರಶೈವದೀಕ್ಷಾ ಗುರುವಿನಲ್ಲಿಯೂ ಕೂಡಾ ವರ್ಣಾಶ್ರಮಾಚಾರವು ಇರಬೇಕಾದುದು ತಿಳಿದು ಬರುವದರಿಂದ, ವೀರಶೈವರಲ್ಲಿ ವರ್ಣಾಶ್ರಮಗಳ ಅಗತ್ಯವು ಎಷ್ಟಿದೆಯೆಂಬುದು ತಿಳಿಯುತ್ತದೆ. ಬಾಳೆಹಳ್ಳಿ, ಉಜ್ಜನಿ, ಶ್ರೀಶೈಲ, ಕೇದಾರ, ಕಾಶಿ ಮೊದಲಾದ ಸ್ಥಲಗಳಲ್ಲಿರುವ ವೀರಶೈವ ಮಠಾಚಾರ್ಯರ ಪೀಠದ ವಂಶಜರಾದ ಗುರುಸ್ಥಲದ ಮಹತ್ವವು ಜಗನ್ಮಾನ್ಯವಾದದ್ದೆಂದು ಶಾಸ್ತ್ರಗಳು ಹೇಳುತ್ತವೆ.

ಶ್ಲೋಕ : ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ।
ಗುರು ಬ್ರಹ್ಮಾ ಗುರು ವಿಷ್ಣು ಗುರು ದೇವಮಹೇಶ್ವರಃ ॥
ಗುರು ಸಾಕ್ಷಾತ್ಪರ ಬ್ರಹ್ಮತಸ್ಮೈ ಶ್ರೀಗುರವೇ ನಮಃ ।

ಶ್ರೀಗುರುಗಳಿಂದ ಶಿವಲಿಂಗವನ್ನು ಸಂಸ್ಕೃತರಾಗಿ ಸ್ವೀಕರಿಸಬೇಕಲ್ಲದೆ ಅನ್ಯಥಾ ಎಂದಿಗೂ ದೊರೆಯಲಾರದು. ಮುಕ್ತಿಗೆ ಸಾಧನೀ ಭೂತವಾದ ಶಿವಲಿಂಗವು ಗುರುವಿನಿಂದಲೇ ಬಂದಿದ್ದರಿಂದ ವಂಶಪರಂಪರ್‍ಯವಾಗಿ ಬಂದ ಗುರುಸ್ಥಲದ ಮಠದಯ್ಯನವರೇ ಭಕ್ತರ ಮನೆಯ ದೈವವಲ್ಲದೆ ಬೇರೆ ದೈವವಿಲ್ಲವೆಂದು ಕಾರ್‍ಯದಲ್ಲಿಯೂ ಮನಸ್ಸಿನಲ್ಲಿಯೂ ವಾಕ್ಯದಲ್ಲಿಯೂ ಗುರುವೆ ಅಜ್ಞಾನ ನಾಶಕನು. ಗುರುವೇ ಸಾಕ್ಷಾತ್ ಬ್ರಹ್ಮ, ಗುರುವೇ ಸಾಕ್ಷಾತ್ ವಿಷ್ಣು, ಗುರುವೆ ಸಾಕ್ಷಾತ್ ಶಿವನು ಎಂದು ಅವಿಚ್ಛಿನ್ನತೆಯಿಂದ ಕೂಡಿದ ಭಕ್ತಿಯಿಂದ ಶಿವಲಿಂಗದಲ್ಲಿರುವ ಏಕನಿಷ್ಠೆಯನ್ನು ಗುರುಗಳಲ್ಲಿರಿಸಿ ಉಭಯೋಪಾಸನೆಯಲ್ಲಿ ನಿರತರಾಗಿರುವವರಿಗೆ ಮುಕ್ತಿಯು ಹಸ್ತಾಮಲಕದಂತೆ ಅಧೀನವಾಗುವದು. ಸಾಕ್ಷಾತ್ಪರ ವಸ್ತುವೇ ಭಕ್ತಾದಿಗಳಿಗೆ ಉಪಾಸನಾ ಕ್ರಮವನ್ನು ತಿಳಿಸಿ, ಭಕ್ತರ ಅಜ್ಞಾನವನ್ನು ನಾಶಪಡಿಸಿ ತನ್ನಂತೆ ಮಾಡಿಕೊಳ್ಳುವದಕ್ಕೋಸ್ಕರ ಅವತರಿಸಿದ ಮಠದಯ್ಯನವರೇ ಅಷ್ಟಾವರ್ಣಕ್ಕೆ ಸೇರಿದ ಗುರುಗಳೆಂದು ಸಿದ್ಧವಾದದ್ದರಿಂದ ಇಂಥಾ ಗುರುಸ್ಥಲದವರನ್ನು ತೆಗೆದೊಗೆದು, ಬೇಕಾದ ಜಾತಿಯವರನ್ನು ಗುರುಸ್ಥಲಕ್ಕೆ ಆರಿಸಲಿಕ್ಕೆ ಬರುವದಿಲ್ಲೆಂದು ಪೂರ್ವಗ್ರಂಥಗಳ ಆಧಾರದಿಂದ ಸಿದ್ಧಗೊಳಿಸಿ ಬರೆದದ್ದು ಎಷ್ಟು ಶ್ಲಾಘಿಸಿದರೂ ಸಾಲದು. ಇಂಥ ಗುರುವರ್ಗದವರ ಪೂಜೆಯೇ ಭಕ್ತಾದಿಗಳಿಗೆ ಗುರುವಿನ ಆಧಿಕ್ಯವನ್ನು ಶಾಸ್ತ್ರ ಹೇಳುವದು.

**ಶ್ಲೋಕ :** ಧ್ಯಾನಮೂಲೋ ಗುರೋರ್ಮೂರ್ತಿಃ । ಪೂಜಾ ಮೂಲಂಗುರೋಃಪದಂ
ಮಂತ್ರ ಮೂಲಂ ಗುರೋರ್ವಾಕ್ಯಂ ಮುಕ್ತಿ ಮೂಲೋಗುರೋಃ ಕೃಪಾ ॥

ಗುರುವಿನ ಸಹಜಾ ಕೃತಿಯೇ ಧ್ಯಾನಕ್ಕೆ ಕಾರಣವಾಗಿರುವದು ಗುರುವಿನ ಪಾದವೇ ಪೂಜೆಗೆ ಹೇತುವಾಗಿರುವದು; ಗುರುವಿನ ವಾಕ್ಯವೇ ಮಂತ್ರಕ್ಕೆ ನಿಧಾನವಾಗಿರುವದು; ಗುರುವಿನ ಕೃಪೆಯೇ ಮುಕ್ತಿಗೆ ಬೀಜವಾಗಿರುವದು ಎಂಬೀಪ್ರಮಾಣದಿಂದ ಇಂತಹ ಗುರುಸ್ಥಲ ಪೀಠಗಳು ಪ್ರಸಿದ್ಧವಾಗಿದ್ದು ಅನೂಚಾನವಾಗಿ ನಡೆದು ಬಂದವರನ್ನು ಹೀಯಾಳಿಸಿ ಕೃತ್ರಿಮ ವರ್ಗದವರೆಂದು ಬರೆದಿರುವ ಆ. ಮು. ಪಾಟೀಲರು ಪರರ ತೇಜೋಭಂಗ ಮಾಡಿ ಗುರುಸ್ಥಲದ ಮಠದಯ್ಯನವರ ನಾಶವನ್ನು ಹಾರೈಸುತ್ತ ಗುರುಸ್ಥಲವನ್ನು ಆಕ್ರಮಿಸಬೇಕೆಂಬುವದನ್ನು ಖಂಡಿಸಿ ಬರೆದಿರುವದು ಥಾಮರಗಣಕ್ಕೆ ಸೇರಿದ ನಮಗೆ ನಮ್ಮ ಪ್ರಾಚೀನ ವೀರಶೈವ ಮತ ತತ್ವ ಉತ್ಪತ್ತಿಯ ನಿಜ ಸ್ವರೂಪವು ಸರ್ವರಿಗೂ

ತಿಳಿಯುವಂತೆ ಅಚ್ಚ ಕನ್ನಡದಲ್ಲಿ ಬರೆದಿದ್ದ ಈ ಮಂತ್ರವಾದಿಗೆ ಮದ್ದೆಂಬ ಗ್ರಂಥವು ಅತ್ಯಂತ ಅಮೂಲ್ಯವಾದ ನಮ್ಮ ಕನ್ನಡ ನಾಡಿನ ವೀರಶೈವ ಜನಾಂಗದ ತಮ್ಮ ಶ್ರೈಶಿಷ್ಟ್ಯದ ಕಡೆಗೆ ಕಣ್ಣು ತೆರೆಸುವ ಗ್ರಂಥವನ್ನು ಪ್ರಕಟಿಸಿ ಶಾಸ್ತ್ರಿಗಳು ವೀರಶೈವರ ಚಿರಕೃತಜ್ಞತೆಗೆ ಪಾತ್ರರಾಗಿದ್ದಾರೆ.

**ಮಹದೇವಪ್ಪ ಶಿದ್ದಪ್ಪ ಶೆಟ್ಟರು,**
ಹೊಸರಿತ್ತಿ.

ಶ್ರೀ

ವೇ. ಪಂ. ಕರವೀರ ಶಾಸ್ತ್ರಿಗಳು ರಚಿಸಿದ ಮಂತ್ರವಾದಿಗೆ ಮದ್ದೆಂಬ ಈ ಕನ್ನಡ ಗ್ರಂಥವನ್ನು ಪರಿಶೀಲಿಸಲು ತುಂಬಾ ಸಂತೋಷವಾಗುತ್ತದೆ. ಇವರ ಆತ್ಮನಿವೇದನೆಯಲ್ಲಿ ವೀರಶೈವ ಮತಉತ್ಪತ್ತಿ ಅಷ್ಟಾವರ್ಣಗಳಲ್ಲಿಯ ಗುರುಜಂಗಮರೇ ವಂಶ ಪರಂಪರ ಪೂಜ್ಯವಸ್ತುಗಳೆಂದು ಈ ವಿಷಯಗಳಲ್ಲಿ ನಿಷ್ಪಕ್ಷಪಾತಿಗಳಾದ ಅನೇಕ ಪಂಡಿತರುಗಳ ವಿಮರ್ಶಾತ್ಮಕ ಅಭಿಪ್ರಾಯಗಳು ಇತ್ಯಾದ್ಯನೇಕ ಉಪಯುಕ್ತ ಮತ್ತು ಅಪೂರ್ವ ವಿಚಾರಗಳು ಅನೇಕ ಗ್ರಂಥಗಳ ಪರಿಶೋಧನೆಯಿಂದ ಸಯುಕ್ತವಾಗಿ ವಿವರಿಸಲ್ಪಟ್ಟದ್ದಾಗಿರುವವು. ಈ ಗ್ರಂಥವು ಒಂದು ಮಹತ್ವದ ಪ್ರಯೋಜನವಾಗದೆ " ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭೂತಲೇ ॥ ತದಾ ತದಾವತಾರೋಽಯಂ ಗಣೇಶಾನಾಂ ಮಹಿತಲೇ ॥ "

ಯಾವಾಗ ಯಾವಾಗ ವೀರಶೈವ ಧರ್ಮಕ್ಕೆ ಹಾನಿಯು ಸಂಭವಿಸುವದೋ ಆವಾಗ ಆವಾಗ ಪ್ರಮಥಾಗ್ರಗಣ್ಯರ ಅವತಾರವು ಭೂಲೋಕದಲ್ಲಿ ಆಗುವದೆಂಬ ಪ್ರಮಾಣದಿಂದಲೂ ಪಂಚಾಚಾರ್ಯರು ಈ ಭರತ ಭೂಮಿಯಲ್ಲಿ ವೀರಶೈವ ಪಂಚಪೀಠಗಳನ್ನು ಸ್ಥಾಪಿಸಿದ್ದಲ್ಲದೆ ಪ್ರತಿಯೊಂದು ಹಳ್ಳಿ ಪಟ್ಟಣಗಳಲ್ಲಿ ಇವುಗಳ ಶಾಖಾ ಗುರುಸ್ಥಲದ ಮಠಗಳನ್ನು ನಿರ್ಮಿಸಿ ಧರ್ಮ ಸ್ಥಾಪನೆಯನ್ನು ಮಾಡುತ್ತಾರೆಂಬ ಪ್ರಮಾಣದಿಂದಲೂ ಇವರ ಮುಖಾಂತರ ವೀರಶೈವ ಭಕ್ತಾದಿಗಳಿಗೆ ದೀಕ್ಷೆ, ಲಿಂಗಧಾರಣ, ಪಾದಪೂಜೆ, ತೀರ್ಥ–ಪ್ರಸಾದಗಳನ್ನು ಇಲ್ಲಿಯ ಪರಿಯಂತರ ಈ ಗುರುಸ್ಥಲದ ಮಠಸ್ಥರೇ ಮಾಡಿಸುತ್ತ ಬಂದಿದ್ದಾರೆಂಬವನ್ನು ಗ್ರಂಥಗಳ ಆಧಾರದಿಂದ ತೋರಿಸಿಕೊಟ್ಟಿದ್ದಾರೆ. ಈಗ ಮಾತ್ರ:

ಶ್ಲೋಕ: ಶಾಕ್ಯಸಂತಾಜಿ ನಾಸ್ತಿಕ್ಷ ಮುಂಡಾಃ ಕಾಷಾಯವಾಸಸಃ ।
ಶೂದ್ರಾ ಧರ್ಮಂಚರಿಷ್ಯಂತಿ ಯುಗಾಂತೇ ಸಮುಪಸ್ಥಿತೇ ॥

ಕಲಿಕಾಲ ದೋಷದಿಂದ ಮಿಥ್ಯಾದಿ ನಾನಾ ದೋಷಂಗಳಧಿಕವಾಗಿ ಧರ್ಮವಳಿದು ಅಧರ್ಮವೇ ಅರಸಾಗಿರುವದರಿಂದ ಇಂಥ ದುರ್ಗುಣಗಳುಳ್ಳ ವರನ್ನೇ ಪರಿವಾರವಂ ಕಟ್ಟಿಕೊಂಡು ಇವರಲ್ಲಿ ಸ್ವಾರ್ಥದ ಕಸುವು ಮಿತಿಮೀರಿ ಬೆಳೆದು ಐಹಿಕ ಸುಖಕ್ಕಾಗಿ ವಂಶ ಪರಂಪರವಾಗಿ ಬಂದ ಗುರುಜಂಗಮರ ವಂಶ ವನ್ನು ನಾಮಶೇಷ ಮಾಡುವದೊಂದು ನಾಸ್ತಿಕ ಶರಣ ಸೇವಾ ಸಂಘವೆಂಬ ಸಂಸ್ಥೆಯನ್ನು ಕಟ್ಟಿಕೊಂಡು ಘಾತಕ ಯತ್ನವನ್ನು ಅ. ಮು. ಪಾಟೀಲರು ಬಳಕೆ ಯಲ್ಲಿ ತರಹತ್ತಿರುವರು. ತಾವು ವೀರಶೈವರೆಂದು ಹೇಳಿ ತಮ್ಮ ಹಿರಿಯರು ನಡೆದು ಕೊಂಡ ನಡತೆಯನ್ನು ಮೂಲೆಗೊತ್ತಿ ತನ್ನದೊಂದು ಹೊಸ ಶರಣ ಸೇವಕ ಸಂಘವನ್ನು ಸ್ಥಾಪಿಸಿಕೊಂಡು ತನ್ನದೇ ತಾರಕನೆಂದು ಜನಗಳಿಗೆ ಅನುಭವ ವನ್ನು ತಂದುಕೊಟ್ಟು, ಹೊಸ ಪಂಗಡವನ್ನುಂಟುಮಾಡಲು ಸಮರ್ಥನಲ್ಲದ ಪಾಟೀಲರು ಎಂಥ ತೇಜಸ್ವಿಯಿದ್ದರೂ ಎಂಥ ನಿಸ್ಪೃಹಿಯಿದ್ದರೂ ಎಂಥ ಸದ್ಗುಣಿ ಯಿದ್ದರೂ ಎಂಥ ಪರೋಪಕಾರಿಯಿದ್ದರೂ ಎಂಥ ವಿದ್ವಾಂಸನಿದ್ದರೂ ಇಂಥವರು ಧಾರ್ಮಿಕ ವ್ಯವಹಾರದಲ್ಲಿ ಕೈಹಾಕಲು ಸರ್ವಥಾ ಅಧಿಕಾರಿಗಳಲ್ಲವೆಂಬುದನ್ನು ಶಾಸ್ತ್ರಿಗಳು ಈ ಗ್ರಂಥದಲ್ಲಿ ತೋರಿಸಿಕೊಟ್ಟದ್ದು ವೃದ್ಧಾಚಾರಕ್ಕೂ ಶಾಸ್ತ್ರಾಧಾ ರಕ್ಕೂ ಲೋಪ ಬಾರದಂತೆ ಸಯುಕ್ತಿಕವಾಗಿ ಸುಸಂಘಟಿತವಾಗಿ ವಿವರಿಸಲ್ಪ ಟ್ಟಿವೆ. ವೀರಶೈವರಲ್ಲಿ ಜಾತಿ-ಕುಲಗಳು ಸುಳ್ಳೆಂತಲೂ ವರ್ಣಾಶ್ರಮ ಧರ್ಮಗಳಲ್ಲಿ ನಿರತರಾಗಿರುವ ವೀರಶೈವ ಗುರುಸ್ಥಲ ಮಠದಯ್ಯನವರಿಗೆ ಅಷ್ಟಾವರ್ಣಾಂತರ್ಗತ ಪೂಜ್ಯ ಸ್ಥಾನವು ಸಲ್ಲುವದೆಂದು ಭಕ್ತಾಗ್ರಗಣ್ಯರಾದ ರುದ್ರಪ್ಪ ಸಿದ್ದಪ್ಪ ಕೊಟಗಿ, ಗಜೇಂದ್ರಗಡ ಶಾಳಾ ಮಾಸ್ತರ ನಿಡಗುಂದಿ ಇವರು ಸನ್ ೧೯೧೭ನೇ ಇಸ್ವಿಯಲ್ಲಿ "ಅಷ್ಟಾವರಣ ವಿಚಾರಸಾರ" ಎಂಬ ಗ್ರಂಥವನ್ನು ಬರೆದಿದ್ದಾರೆ ನೋಡಿರಿ. ಅ. ಮು. ಪಾಟೀಲರು ಅಯ್ಯನವರ ಶ್ರೇಷ್ಠತ್ವಕ್ಕೆ ಭಂಗವನ್ನುಂಟು ಮಾಡುವ ಭ್ರಮಿಕ ಕಲ್ಪನೆಯನ್ನು ಹೋಗಲಾಡಿಸುವ ಮಂತ್ರವಾದಿಗೆ ಮದ್ದೆಂಬ ಗ್ರಂಥವು ಕನ್ನಡನಾಡಿನ ವೀರಶೈವ ಭಕ್ತಾದಿಗಳಿಗೂ ಮಠದಯ್ಯ ನವರು ಸಂಗ್ರಹಿಸಿ ಇಡಲು ಯೋಗ್ಯವಾಗಿದೆ.

**ಹೊಸರಿತ್ತಿ.** **ಪಂಚಪ್ಪ ಕೊಟ್ರಪ್ಪ ನೈಸೂರಗಿ.**

# ಆತ್ಮನಿವೇದನೆ

ಶ್ರೀ ಷಡಕ್ಷರ ದೇವರು ರಚಿಸಿದ ರಾಜಶೇಖರ ವಿಳಾಸದ ಮೊದಲನೇ ಆಶ್ವಾಸದಲ್ಲಿ:

ಪರಿಪರ ಪಾಪಮುಂ ! ನೆಗಳ್ದ ಪಿ ಜಪಂ ! ಅನ್ಯಮನ ಪ್ರಸೂನಮುಂ ಕೊರಗಿಸುವೇ ತಪಂ ! ಪರರ ಜೀವಿತಮುಂ ! ಪರಿದಿಕ್ಕು ಅಂದಮೋ ಪರತರ ಶಿಲಿಂ ಅಪರಿಸಿ ಬಿಡಗರ ಮರ್ಮವಸ್ತ್ರವ ಭೇದಿ ಪೊಂದಿರದ ಪೋದಕ್ಕೆ ಪಾಪಂ ! ಮಾರ್ಗಪತಾಪದಿಂ ಕೃತಾರ್ಥನೋ ! ೧ !

ನಮ್ಮ ಮುಖ್ಯವಾದವು ವೀರಶೈವ ಮತದಲ್ಲಿ ಚತುರ್ವರ್ಣಾಶ್ರಮಗಳು ತದಂತರ್ಗತ ಜಾತಿ-ಭೇದಗಳು ಶಾಸ್ತ್ರೀಯ ಸಿದ್ಧಾಂತವಾಗಿರುವವೆಂಬುದು. ಆದರೆ ಕೆಲ ಮಹಾಶಯರು ಕಲಿಕಾಲ ಪ್ರಭಾವದಿಂದ ವರ್ಣಸಂಕರ ಜಾತಿ ಸಂಕರದ ಕಾರ್ಯಗಳಿಗೆ ಕಂಕಣ ಕಟ್ಟಿಕೊಂಡಿದ್ದಾರೆ. ಅವರಲ್ಲಿ ಶ. ಮ. ಪಾಟೀಲರು ಅಗ್ರಸ್ಥಾನವನ್ನು ವಹಿಸಿದಂತೆ ಕಾಣುತ್ತದೆ. ಅದು ಏನೇ ಇರಲಿ; ಇವರ ಒಟ್ಟು ಅಭಿಪ್ರಾಯವೇನೆಂದರೆ, ವೀರಶೈವ ಮತದಲ್ಲಿ ವರ್ಣಭೇದ, ಜಾತಿ ಭೇದ ಇಲ್ಲವೆಂಬುದೇ ಇರುತ್ತದೆ. ಹೀಗೆ ಗ್ರಂಥಗಳಲ್ಲಿ ಪ್ರಭೃತಿಗಳು ತಮ್ಮ ಸ್ವಪಂಥದವರಲ್ಲಿ ಕೃತಿಯ ಮೂಲಕ ತಂದು ಮಾರ್ಗದರ್ಶಕರಾಗಬೇಕು. ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದಿತ ನಮ್ಮ ವೀರಶೈವ ಮತದಲ್ಲಿ ಅನೇಕ ಜಾತಿ ಮತಗಳಿವೆ. ಅವೆಲ್ಲವುಗಳು ಭಿನ್ನ, ಭಿನ್ನ, ವಿಶಿಷ್ಟ ಜಾತಿಗಳಾಗಿವೆ. ಇದರಂತೆ ಪರಮತ ಸಿದ್ಧಾಂತಗಳಾದ ದ್ವೈತಾದ್ವೈತ, ವಿಶಿಷ್ಟಾದ್ವೈತ ಮತಗಳಲ್ಲಿಯೂ ಕೂಡ ಅನೇಕಾನೇಕ ಜಾತಿ ಭೇದಗಳಿರುವದು ಪ್ರಸಿದ್ಧವಿದೆ. ಈ ಜಾತಿ ಭೇದ ವಿವರಣೆಯು ನಿನ್ನೆ ಮೊನ್ನೆ ನಾವು-ನೀವು ಕೂಡ ಮಾಡಿದ್ದಲ್ಲ. ಅನಾದಿ ಕಾಲದ ಮತಸ್ಥಾಪನಾಚಾರ್ಯರಿಂದ ಕುಲಧರ್ಮ ನೇಮಗಳು ಬಂದು ಬೇರು ಬಿಟ್ಟಿರುತ್ತವೆ. ಆಂಗ್ಲಭಾಷಾ ಪಂಡಿತರಾದ ಶರಣ ಸೇವಾ ಸಂಘದ ಶ. ಮ. ಪಾಟೀಲರು ತಮ್ಮ ಬುದ್ಧಿಯನ್ನು ಚೂಪಾಗಿ ಮಸೆದು, ಸನಾತನ ವೀರಶೈವ ಧರ್ಮದ ವೃಕ್ಷದ ಬೇರನ್ನು ಕತ್ತರಿಸಲಿಕ್ಕೆ ಹತ್ತಿದ್ದು ಅತ್ಯಂತ ವಿಷಾದದ ಸಂಗತಿಯಾಗಿದೆ. ಇವರ ಎಳೆದಾಟದ ಲೇಖನವನ್ನವಲೋಕಿಸಿದರೆ ಎಲ್ಲೆಲ್ಲಿಯೂ ವರ್ಣಸಂಕರ, ಜಾತಿಸಂಕರ ಶಬ್ದಗಳೇ ತುಂಬಿವೆ. ವೇದಗಳ ಋಕ್ಕುಗಳಂತೂ ದಿಕ್ಕೆಟ್ಟು ಹೋಗಿವೆ. ಮನುಸ್ಮೃತಿ, ಪಾರಮೇಶ್ವರಾಗಮೋಕ್ತಿಗಳು ಇವರ

ಹೇಳಿಕೆಯಂತೆ ವರ್ತಿಸಿವೆ. ಇವರ ರಗಳೆಯು ಲೇಖದ ಮಂತ್ರವಾದಿಯನ್ನವ ಲೋಕಿಸಿ ಬರೆಯುತ್ತ ಹೋದರೆ ಹಿಂದುಸ್ತಾನದಲ್ಲಿಯ ಎಕ್ಸರ ಸಾಯಿಜ, ನೋಟ ಬುಕ್ಸು ಸಾಲದೆ ಹೋಗಬಹುದೆಂದು, ಇವರ ಮುಖ್ಯವಾದ ಮೂಲ ಭ್ರಮೆಗಳನ್ನಷ್ಟು ಖಂಡಿಸಿ, ವರ್ಣವ್ಯವಸ್ಥೆಯ ಹೆಚ್ಚುಗಾರಿಕೆಯನ್ನು ಸಪ್ರಮಾಣ ಗಳಿಂದ ಜ್ಞಾನಿಗಳಾದ ಭಕ್ತರೆದುರಿಗಿಡುತ್ತೇನೆ. "ಲೋಕಾನಾಂತು ವಿವಿ ವೃದ್ಧ್ಯರ್ಥಂ। ಮುಖಬಾಹುರೂಪಾದಿತಃ। ಬ್ರಾಹ್ಮಣಂ, ಕ್ಷತ್ರಿಯಂ, ವೈಶ್ಯಂ, ಶೂದ್ರಂ ಚ ನಿರಿವರ್ಯಯೇತ್ ।" ಎಂದು ಪ್ರಸಿದ್ಧಗೊಳಿಸಿದ್ದಾರೆ. ಬ್ರಾಹ್ಮ ಣಾದಿ ವರ್ಣ ಸೃಷ್ಟಿಯನ್ನು ಹೇಳಿರುವಾಗ ಕ. ಮು. ಪಾಟೀಲರು ಇದು ಜಾತಿ ಯನ್ನು ಜನ್ಮದಿಂದ ನಿರ್ಣಯಿಸಬೇಕೆಂದು ಹೇಳಿಲ್ಲ; ಗುಣದಿಂದ ಸಿದ್ಧಗೊಳಿಸ ಬೇಕೆಂದು ಹೇಳಿದೆ ಎಂದು ಬಡಬಡಿಸಿ ಬರೆದಿದ್ದಾರೆ.

ಜಾತಿವಾಚಕ, ಸ್ಥಲವಾಚಕ, ಗುಣವಾಚಕಗಳೆಂದು ಮೂರು ಪ್ರಕಾರ ಗಳಲ್ಲಿ ಗುಣವಾಚಕಕ್ಕೆ ಉದಾಹರಣೆ— "ಮದ್ಭೋಭಕ್ತಾಧಿಕಃ" ಭಕ್ತಿಯುಳ್ಳ ವನು ನನಗಿಂತಲೂ ಹೆಚ್ಚು ಎಂಬ ಗುಣವಾಚಕ ಶಬ್ದದ ಅರ್ಥವನ್ನು ಷಟಸ್ಥಲ ದೊಳಗಿನ ಭಕ್ತ ಶಬ್ದಕ್ಕೆ ಅರ್ಥ ಮಾಡಬಾರದು. ಹಾಗೆ ಮಾಡಿದ್ದಾದರೆ, ಮುಂದಿನ ಸ್ಥಲಗಳಿಗೆ ಲೋಪಬರುತ್ತದೆ. ಷಟಸ್ಥಲದೊಳಗಿನ ಭಕ್ತಸ್ಥಲದವರೇ ಮಾಹೇಶ್ವರರಾಗುತ್ತಾರೆ ಎಂದರೆ ಜಾತಿವಾಚಕದೊಳಗಿರತಕ್ಕ ಪೂಜ್ಯ-ಪೂಜಕ ಭಾವವಾದ ಗುರುಭಕ್ತ ಅರ್ಥಕ್ಕೆ ಲೋಪಬರುತ್ತದೆ. ಆದ ಕಾರಣ ಆಯಾ ಸ್ಥಲದೊಳಗಿನ ಅರ್ಥವನ್ನು ಆಯಾ ಸ್ಥಲಕ್ಕನುಸರಿಸಿ ಮಾಡಬೇಕು. ಅರ್ಥ ವನ್ನು ತಿಳಿಯದಲೆ ಇವಕ್ಕೆ ಅಪಾರ್ಥ ಮಾಡಿ ಸಮಾಜವನ್ನು ಕೆಡಿಸಬಾರದು. ಇಂಥ ಉಪದೇಶಿಕರ ಉಪದೇಶಗಳನ್ನು "ಏಕೇನ ಜನ್ಮನಾಮುಕ್ತಿ" ಎಂಬುವ ಸನಾತನ ಸಾಂಪ್ರದಾಯಗಳು ಲೋಪವಾಗುವದರಿಂದ, ಮಿಶ್ರತತ್ವದವರ ಮಾತನ್ನು ನಂಬಬಾರದು.

ಮನುಸ್ಮೃತಿಯು— "ಜಗದುತ್ಪತ್ತಿ ಕಥನಂ" ಎಂದು ಪ್ರಾರಂಭಿಸಿ ಕ್ರಮವಾಗಿ ಜಲಸೃಷ್ಟಿ, ದೇವಗಣಾದಿಸೃಷ್ಟಿ, ಬ್ರಹ್ಮೋತ್ಪತ್ತಿ, ಬ್ರಹ್ಮಸ್ವರೂಪ, ಸ್ವರ್ಗ ಭೂಮೀಖದಿ ಸೃಷ್ಟಿ ಮೊದಲಾದ ಅನೇಕ ಸೃಷ್ಟಿ ವಿವರಣೆಯೊಡನೆ ಕರ್ಮ ಗುಣಗಳುತ್ಪತ್ತಿಯನ್ನು ಹೇಳಿರುವದು. ಆದರೆ ಬ್ರಾಹ್ಮಣಾದಿ ಜಾತಿಯ ಉತ್ಪತ್ತಿಯನ್ನು ಹೇಳುವಾಗ ಗುಣೋತ್ಪತ್ತಿಯಿಂದ ಜಾತಿಯನ್ನು ನಿರ್ಣಯಿಸ

ವಲ್ಲದೆ. ಇದರಿಂದ ಯಾವರೂ ನಿಮ್ಮ ಪಾಂಥಲದ ವರ್ಣಾಶ್ರಮಧರ್ಮಗಳನ್ನು ವಂಶ ಪರಂಪರಾಗತವಾದ ಗುರುಕುಲದ ಯುವಜನರನ್ನು ನಾಶಮಾಡಿ ಇವರನ್ನು ಭಕ್ತರನ್ನಾಗಿಸುವುದು ಸಿದ್ಧಾಂತವಾಗಲಾರದು. ಶಾಸ್ತ್ರದಲ್ಲಿ ವಿಧಿವಾದವೆಂತಲೂ ಅರ್ಥವಾದವೆಂತಲೂ ಎರಡು ಭಾಗಗಳುಂಟು. ಮಕ್ಕಳಿಗೆ ಔಷಧ ಸೇವನೆಯಲ್ಲಿ ಪ್ರವೃತ್ತಿಯನ್ನು ಹುಟ್ಟಿಸುವದಕ್ಕಾಗಿ ಊಟದ ಪದಾರ್ಥಗಳಲ್ಲಿ ಔಷಧಗಳನ್ನು ಬೆರಿಸಿಕೊಡುವಂತೆ ಉತ್ತರೋತ್ತರ ಮುಕ್ತಿ ಸಂಪಾದನೆಗೆ ಅಂಗವೆನಿಸಿದ ಶಿವ ದೀಕ್ಷೆಗಳಲ್ಲಿ ಮಾನವರಿಗೆ ಪ್ರವೃತ್ತಿಯನ್ನು ಹುಟ್ಟಿಸುವದಕ್ಕಾಗಿ "ಎಂಥೇ ಧನೇಷು ವರ್ಗ್ವೇಷು" ಎಂಬ ಪ್ರಮಾಣಗಳು ಸಿದ್ಧಾಂತ ಗ್ರಂಥಗಳಲ್ಲಿ ಪ್ರಚೋದಿತ ವಾಕ್ಯಗಳಾಗಿ ಹೇಳಲ್ಪಟ್ಟಿವೆ. ಇಂಥವುಗಳು ವಿಧಿವಾಕ್ಯಗಳೆಂದು ಹೇಳಲಿಕ್ಕಾಗದು. ಪ್ರಕರಣಾನುಸಾರವಾಗಿ ಆಯಾಯ ವಸ್ತುವಿನ ಪ್ರಶಂಸೆಯನ್ನು ಮಾಡುವದರಲ್ಲಿ ಅರ್ಥವಾದಕ್ಕೆ ತಾತ್ಪರ್ಯವಲ್ಲದೆ, ತನ್ನ ವಾಕ್ಯಾರ್ಥದಲ್ಲಿ ಪ್ರಮಾಣ ಎಲ್ಲವು ಶಿವದೀಕ್ಷಾ ಪ್ರಶಂಸೆಯನ್ನು ಮಾಡತೊಡಗಿದ ಅರ್ಥವಾದ ಶ್ಲೋಕಗಳನ್ನು ತೆಗೆದುಕೊಂಡು ದೀಕ್ಷಿತರಾದವರಿಗೆ ಕುಲ, ವರ್ಣಾಶ್ರಮಗಳಿಲ್ಲವೆಂದು ಇವೇ ವಿಧಿವಾಕ್ಯಗಳೆಂದು ಹೇಳುವದು ಪ್ರಮಾಣವಲ್ಲ. ಇಂಥ ಅರ್ಥವಾದ ಯುಕ್ತವಾದ ಶ್ಲೋಕಗಳು ದೀಕ್ಷಾ ಪ್ರಕರಣದಲ್ಲಿ ಏಕೆ? ಎಲ್ಲ ಪ್ರಕರಣಗಳಲ್ಲಿಯೂ ಬೇಕಾದಷ್ಟು ದೊರೆಯುತ್ತವೆ. ಲಿಂಗಧಾರಣ ಪ್ರಕರಣದಲ್ಲಿ ಯಾರು ಗುರುವಿನಿಂದ ಶಿವಲಿಂಗವನ್ನು ಪಡೆಯುತ್ತಾರೋ? ಅವರು ಬ್ರಾಹ್ಮಣರಾಗಲಿ, ಕ್ಷತ್ರಿಯರಾಗಲಿ, ವೈಶ್ಯರಾಗಲಿ, ಶೂದ್ರರಾಗಲಿ, ಅಂತ್ಯಜರಾಗಲಿ " ಲಿಂಗಧಾರಣ ಮಾತ್ರೇಣ " ಎಂದದೆ. ಆದ್ದರಿಂದ ಲಿಂಗ ಸಂಬಂಧವಾದ ಯಾವ ಅನುಷ್ಠಾನವೂ ಬೇಕಿಲ್ಲ. ಕೇವಲ ಲಿಂಗಧಾರಣ ಒಂದರಲ್ಲಿಯೇ ಶಿವಸ್ವರೂಪ ಸಿದ್ಧಿಯುಂಟಾಗುತ್ತದೆ. ಇದರಂತೆ ರುದ್ರಾಕ್ಷಿ ಧಾರಣ ಪ್ರಕರಣವನ್ನು ನೋಡಿರಿ. ಸಿದ್ಧಾಂತ ಶಿಖಾಮಣಿಯಲ್ಲಿ:

ಶ್ಲೋಕ: ತಸ್ಯಪಾಪಕಥಾ ನಾಸ್ತಿ ಮಹೀಶ ಸ್ಯಾಪಿನ ಸಂಶಯಃ । ಬ್ರಹ್ಮಹಾ ಮದ್ಯಪಾಯಿ ಚ ಸ್ವರ್ಣ ಹೃದ್ಗುರುತಲ್ಪಗಃ । ಮಾತೃಹಾ ಪಿತೃಹಾ ಚೈವ ಭ್ರೂಣಃ । ಕೃತಘಾತಕಃ । ರುದ್ರಾಕ್ಷಿ ಧಾರಣದೇವ ಮುಚ್ಯತಿ ಸರ್ವಪಾತಕೈಃ ॥

ವಚನ: ಪರಶಿವನ ಜ್ಞಾನ ಚಕ್ಷುವಿನಲ್ಲಿ ಉದಯವಾದ ರುದ್ರಾಕ್ಷಿಯ ಹಸ್ತ, ತೋಳು,ಉರ,ಕಂಠ,ಕರ್ಣ, ಮುಖ ಕಮಲ ಧರಿಸಿದ ಶಿವಶರಣಾರ್ಶೀ ಗುರು ವು

ಈ ರುದ್ರಾಕ್ಷಿಯ ಜಪಿಸಿದಾತನೇ ಸದ್ಯೋಮುಕ್ತನು. ಇದು ಕಾರಣ ಉಪಹರಿಸುವ ಮನುಮುನೀಶ್ವರರು ಶ್ರೀ ವಿಭೂತಿ ರುದ್ರಾಕ್ಷಿನೆ ಧರಿಸಿ ಶಿವಲಿಂಗಾರ್ಚನೆಯ ಮಾಡುತಿರ್ಪರು. ಪ್ರಮಥಗಣ ಮುಖ್ಯವಾದ ಗಣಾಧೀಶ್ವರರು ಪ್ರಣವ ಸ್ವರೂಪಿಗಳಾಗುತಿರ್ಪರು. ನೋಡಿದವರು, ಮುಟ್ಟಿದವರು, ಧರಿಸಿದವರು, ಜಪಿಸಿದವರೆಲ್ಲರೂ, ಸಕಲ ಪ್ರಪಂಚವನ್ನು ಆಳಿದ ಪರಶಿವ ಸ್ವರೂಪವದು ತಪ್ಪದು ನೋಡಾ ಇದು ಕಾರಣ ನಾನು ವಿಭೂತಿ ರುದ್ರಾಕ್ಷಿಯನೆ ಧರಿಸಿ ಶಿವಲಿಂಗಾರ್ಚನೆಯ ಮಾಡಿ ಪ್ರಣವ ಪಂಚಾಕ್ಷರಿಯನೆ ಜಪಿಸುತಿರ್ದೆನಯ್ಯಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ ||

ಇಷ್ಟಕ್ಕೆ ಮುಗಿಯಲಿಲ್ಲ; ಮಂತ್ರ ಪ್ರಕರಣ ನೋಡು.

ಶ್ಲೋಕ: ಸಕೃದುಚ್ಚಾರ ಮಾತ್ರೇಣ ಪಂಚಾಕ್ಷರಮಹಾ ಮನೋಃ । ಸರ್ವೇಷಾಮೇವ ಜಂತೂನಾಂ ಸರ್ವ ಪಾಪಕ್ಷಯೋಭವೇತ್ ।

ಯಾರು ರುದ್ರಾಕ್ಷಿಯನ್ನು ಧರಿಸುತ್ತಾರೋ ಅವರು ಬ್ರಹ್ಮಹತ್ಯ ಮಾಡಿರಲಿ, ಮದ್ಯಪಾಯಿಗಳಾಗಿರಲಿ, ಗುರುಪತ್ನಿಲೋಲವಾಗಿರಲಿ, ಮಾತೃ-ಪಿತೃ ಹತ್ಯಾದಿಗಳನ್ನು ಮಾಡಿರಲಿ ಈ ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಹೊಂದುವರು. ಯಾರು ತಮ್ಮ ಜನ್ಮಾವಧಿಯಲ್ಲಿ ಒಂದು ಸಾರೆ ಪಂಚಾಕ್ಷರಿ ಮಹಾಮಂತ್ರವನ್ನು ಉಚ್ಚರಿಸುವರೋ ಅವರು ಸರ್ವಪಾಪಗಳಿಂದ ಬಿಡಲ್ಪಟ್ಟು ಪರಿಶುದ್ಧಾತ್ಮರಾಗುವರು. ಇದಲ್ಲದೆ ಶಿವ ಎಂಬೆರಡಕ್ಷರವನ್ನು ಯಾರು ಉಚ್ಚರಿಸುತ್ತಾರೋ ಅವರೊಂದಿಗೆ ಭೋಜನವನ್ನು ಮಾಡಬೇಕೆಂದು, ಅವರ ಸಂಗಡ ಮಲಗಬೇಕೆಂದು ವಿಧಿಸುವ ಇಂಥ ಅನೇಕ ವಾಕ್ಯಗಳಿರುವವು. ಇವುಗಳು ಅರ್ಥವಾದವುಗಳೆನಿಸುವವು. ಇಂಥಹ ಅರ್ಥವಾದವುಗಳಿಗೆ ಸ್ವಾರ್ಥದ ಪ್ರಮಾಣವಿಲ್ಲವು. ಹಾಗೆ ಇಂತಹ ವಾಕ್ಯಗಳನ್ನು ವಿಧಿವಾಕ್ಯಗಳೆಂದೇ ಅರ್ಥ ಮಾಡುವ ಸಂದರ್ಭದಲ್ಲಿ ಶಿವದೀಕ್ಷೆಯನ್ನು ಹೊಂದಿದ ಮೇಲೆ ವೀರಶೈವನಿಂದ ಅವಶ್ಯಕವಾಗಿ ಆಚರಿಸಲ್ಪಡಬೇಕಾದ ಬಹು ದುರ್ಗಮಯವಾದ ಬ್ರಹ್ಮವಿದ್ಯಾಂಗಮಯವಾದ ಷಟಸ್ಥಲದ ಆಚರಣೆಯು ಅವಶ್ಯಕಗಳಲ್ಲವೆಂದೇ ಹೇಳಬೇಕಾಗುತ್ತದೆ. ಶಿವದೀಕ್ಷೆಯಾದ ಆ ಕ್ಷಣವೇ ರುದ್ರಸ್ವರೂಪವು ಸಿದ್ಧಿಸಿತು. ಆ ಮೇಲೆ ರುದ್ರತ್ವ ಪ್ರಾಪ್ತಿಗಾಗಿ ಯಾಕೆ ಷಟಸ್ಥಲೋಪಾಸನವನ್ನು ಹಿಡಿಯಬೇಕು. ಮತ್ತೆ ಲಿಂಗ

ಧಾರಣ ಮಾಡಿದಲ್ಲಿಯೇ ಶಿವತತ್ತ್ವ ಸಿದ್ಧಿಯುಂಟಾದ ಮೇಲೆ ಪುನಃ ಲಿಂಗ ಸಂಬಂಧವಾದ ಕ್ರಿಯಾನುಷ್ಠಾನವೇಕೆ ? "ನಿಜಗುಣ ಕೈವಲ್ಯ - ಪದವಿಯೊಳು ಬಿದ್ದ ಕಡುಪಾಪಿ ಕಿರಾತನು ! ಸುಡುಗಾಡ ಬೂದಿಗಾಲಿ ಶುನಿಸಣೆಮುಳಿಯ ! ತಡಿಯುದವನು ಶಂಭುಲಿಂಗದ ಕರುಣದಿಂದ ಪಡೆದನು ಬಿಡದೆ ಮುಕ್ತಿವನಿತೆಗೂಡಿರಲು !" ಅತಿಪಾಪಿಯಾದ ಕಿರಾತನೋರ್ವನು ಅರಣ್ಯದಲ್ಲಿ ಪ್ರಾಣವಿಯೋಗ ತಾಪದಿಂದ ಬಿದ್ದಿರುವಾಗ ಸುಡುಗಾಡಿನಲ್ಲಿ ತಿರುಗಾಡಿ ಬೂದಿಗಾಲಿನಿಂದ ಬಂದ ಒಂದು ನಾಯಿಯು ಅವನ ಹಣೆಯನ್ನು ಮೆಟ್ಟಿತು. ಆ ನಾಯಿ ಕಾಲಿಗೆ ಹತ್ತಿದ ಹೆಣದ ಬೂದಿಯು ಆ ಕಿರಾತನ ಹಣೆಗೆ ಹತ್ತಿತು. ಅವನು ಮುಂದೆ ಕೆಲಹೊತ್ತಿನಲ್ಲಿ ಸತ್ತನು. ಇವನು ಹಣೆಯಲ್ಲಿ ವಿಭೂತಿಯನ್ನು ಧರಿಸಿದ್ದಾನೆ ಎಂದು ಶಿವನು ಆ ಕಿರಾತನಿಗೆ ಮುಕ್ತಿಯನ್ನು ದಯಪಾಲಿಸಿದನೆಂಬುದಾಗಿ ವಿಭೂತಿಯ ಮಹಿಮೆಯಲ್ಲಿ ಬರೆದಿದೆ. ಇದರಲ್ಲಿ ನಾಯಿಯ ಕಾಲಿನಿಂದ ಬಂದ ಹೆಣದ ಬೂದಿಯನ್ನು ಮುಮುಕ್ಷುಗಳು ಪ್ರತಿದಿನದಲ್ಲಿ ಧರಿಸಬೇಕೆಂಬರ್ಥವಲ್ಲ. ಹೆಣದ ಬೂದಿಯು ಯೋಗ್ಯವಾದದ್ದೆಂತಲೂ ಅಲ್ಲ. ವಿಭೂತಿಯು ಭುಕ್ತಿ – ಮುಕ್ತಿ ದಾಯಕವೆಂದು ಅದರ ಮಹಿಮೆಯನ್ನು ಸಾಮಾನ್ಯವಾಗಿ ( ರೋಚಕ ವಾಕ್ಯದಿಂದ) ಹೇಳಿದ್ದಾಗಿದೆ. ವಿಭೂತಿಯನ್ನು ಧರಿಸಲನುವಾದಲ್ಲಿ ಮುಂದೆ ವಿಧಿ ಹೇಳಲ್ಪಡುತ್ತದೆ. ಹೆಣದ ಬೂದಿಯನ್ನೇ ಧರಿಸುವದು ಶಾಸ್ತ್ರಾಭಿಪ್ರಾಯವಿರದಿದ್ದರೆ ಗೋವಿನ ವಯೋವರ್ಣಾದಿಗಳ ಯೋಗ್ಯ ತಾರತಮ್ಯವನ್ನು ಸಂಸ್ಕರಣದ ರೀತಿಯನ್ನು ಪ್ರಕಟಿಸುವ ಬಗೆಯನ್ನು ಹೇಳಲ್ಪಡುತ್ತದೆ. ಹೇಳಲಸದಳವಾದ ಪಾಪಿಯೂ ಕುಲದಲ್ಲಿ ಕಿರಾತನೂ ಸಂಸ್ಕಾರರಹಿತನೂ ಬಿದ್ದವನೂ ಯತ್ನಶೂನ್ಯನೂ ಮರಣತಾಪ ಪರವಶನೂ ಆದ ನೀಚನು ನಾಯಿಯ ಕಾಲಿನಿಂದ ಬಂದ ಹೆಣದ ಬೂದಿಯಿಂದ ಮುಕ್ತನಾದನೆಂದ ಬಳಿಕ ಭಸ್ಮಕ್ಕಿಂತ ಮೇಲಾದ ವಸ್ತುವಿಲ್ಲೆಂದು ಅದರ ಮಹತ್ವವು ಧ್ವನಿತವಾಗುತ್ತದೆ.

ಭಸ್ಮಧಾರಣ, ರುದ್ರಾಕ್ಷಿ ಧಾರಣ ಮಂತ್ರೋಚ್ಚಾರಣೆಯೊಂದರಲ್ಲಿಯೇ ಸರ್ವ ಪಾಪಕ್ಷಯವಾದ ಮೇಲೆ ಪುನಃ ಪಾಪಕ್ಷಯಕರವಾದ ಉಪಾಸನಾ ಮಾರ್ಗವನ್ನೇಕೆ ಅನುಸರಿಸಬೇಕು. ಹೀಗಿದ್ದು ಇವುಗಳಲ್ಲಿ ಅಡಕವಾಗಿರುವ ಅರ್ಥವು ಅರ್ಥವಾದವಲ್ಲದೆ ವಿಧಿವಾದವಲ್ಲವು. ವೀರಶೈವನು ಶಿವದೀಕ್ಷೆಯನ್ನು ಹೊಂದಿ ಲಿಂಗವನ್ನು ಧರಿಸಿದ ನಂತರ ಮುಕ್ತಿಸಿದ್ಧಿಗಾಗಿ ಗುರುವಿನ

ಆಜ್ಞೆಯಂತೆ ಯಾವ ಜೀವವು ತಾನು ಅಂಗೀಕರಿಸಿದ ಅಪ್ರಾಕೃತವ್ರತಗಳು ಲೋಪವಾಗದಂತೆ ನಡೆಯುತ್ತ ಮೆಲ್ಲಮೆಲ್ಲನೆ ಷಟ್‌ಸ್ಥಲ ಮಾರ್ಗವನ್ನು ಹೊಂದಿ ಶಿವಸ್ವರೂಪವನ್ನು ಪಡೆಯುವದು. ಈ ಮಧ್ಯವ್ರತ ಲೋಪವಾದರೆ ಪತಿತ ನಾಗುವನೆಂಬ ವಾಕ್ಯಗಳಿಗೆ ಅರ್ಥವಿಲ್ಲದಂತೆ ಆಗುವದಲ್ಲದೆ, ತಾನು ಕ್ರಮವಾಗಿ ಹೊಂದಬೇಕಾದ ಸ್ಥಿತಿಯನ್ನು ಮೊದಲೇ ಹೊಂದಿದಮೇಲೆ ಮುಂದಿನ ಪ್ರಯತ್ನ. ಭೂಗತ ದ್ರವ್ಯವನ್ನು ನೋಡಲು ಅಂಜನವು ಬೇಕು. ಮೊದಲೇ ದ್ರವ್ಯ ದೊರ ಕಿದ ಮೇಲೆ ಅಂಜನವೇತಕ್ಕೆ? ಶಿವದೀಕ್ಷೆಯಾದ ಉತ್ತರ ಕ್ಷಣದಲ್ಲಿಯೇ ಮಾಯಾ ಗ್ರಂಥಿಯು ಬಿಚ್ಚಿ ಹೋದ ಮೇಲೆ ಕ್ಷಣಾರ್ಧದಲ್ಲಿಯೇ ಅಮಂಗಲವಾದ ಅಸೂಯಾಬುದ್ಧಿಯು ಕೋಪತಾಪಾದಿಗಳು ಹೊರಟುಹೋಗಿ ಶಿವನ ಸರ್ವಜ್ಞ ತ್ವಾದಿ ಕಲ್ಯಾಣಗುಣಗಳು ಉದಯಿಸಬೇಕಾಗುವದು. ಹೀಗೆ ಹೇಳಲು ಪಾಟೀಲರಿಗೆ ಶಾಸ್ತ್ರದ ಭಯವಿರಲಿಕ್ಕಿಲ್ಲವೇನು ? ಅಥವಾ ಅನುಭವದಲ್ಲಿಯಾ ದರೂ ಇದು ವಿರೋಧವಲ್ಲವೇನು ? ಶಾಸ್ತ್ರ ವಿರೋಧವು ಅನುಭವ ವಿರೋಧವು ಆಗಿರುತ್ತದೆ.

ವೀರಶೈವ ಮತದ ಹೆಚ್ಚುಗಾರಿಕೆಗಾಗಿ ಉತ್ತೇಜನ ಕೊಡುವದಕ್ಕಾಗಿ ಅಷ್ಟಾವರಣ ಮಹತ್ವ ಪ್ರಶಂಸಾಪರವಾಗಿದ್ದ ವಾಕ್ಯಗಳನ್ನು ಮುಂದು ಮಾಡಿ ಗ್ರಂಥ ಬರೆದರೆ ಸೂಜ್ಞರಿಗೆ ಇದು ಶೋಭಿಸಲಾರದು. ಇಂಥ ಪ್ರರೋಚಿಕ ವಾಕ್ಯಗಳನ್ನು ನಮ್ಮ ಸಿದ್ಧಾಂತದಲ್ಲಿರುವದಷ್ಟೇ ಅಲ್ಲ. ಸ್ಮಾರ್ತ ವೈಷ್ಣವಾದಿಗಳ ಸಿದ್ಧಾಂತಗಳಲ್ಲಿಯೂ ಬೇಕಾದಷ್ಟಿವೆ. ಶಂಕರಾಚಾರ್ಯರು ತಮ್ಮ ಮನೀ ಪಂಚಕದಲ್ಲಿ— " ಚಾಂಡಾಲೋಸ್ತು ಸತುದ್ವಿಜೋಸ್ತು ಗುರುರಿತ್ಯೇಷಾ ಮನ ಷಾಮಮ " ಯಾವನು ಅಪರೋಕ್ಷ ಪರವಸ್ತು ಜ್ಞಾನ ಸಂಪನ್ನನೋ ಅವನು ಚಾಂಡಾಲನಿರಲಿ ಯಾವದೊಂದನ್ನು ಎಣಿಸದೆ ನಾನು ಗುರುಯೆಂದು ತಿಳಿಯು ತ್ತೇನೆ ಎಂದು ಹೇಳಿದ ವಾಕ್ಯವು ಜ್ಞಾನ ಪ್ರಶಂಸೆಗೆ ಹೇಳಿದ್ದಾದರೆ, ವೈಷ್ಣವರಲ್ಲಿ ವೈಷ್ಣವ ದೀಕ್ಷೆಯನ್ನು ಪಡೆದು ತಪ್ತ ಮುದ್ರಾದಿಗಳನ್ನು ಧರಿಸಿದ ಯಾವನೊ ಬ್ಬನು ದಾಸನಾಗಿದ್ದರೂ ಸಾಕ್ಷಾದ್ವಿಷ್ಣುವೆಂದೇ ತಿಳಿಯಬೇಕೆಂದು ಹೇಳಿದ್ದು ಮುದ್ರಾದಿಗಳ ಪಾವಿತ್ರತೆಯನ್ನು ಬೋಧಿಸುತ್ತವೆಯಲ್ಲದೆ ಬೇರಿಲ್ಲ. ವೀರಶೈವ ಮತದ ಶಿವದೀಕ್ಷಾ ಪ್ರಶಂಸಾಪರವಾಗಿದ್ದ " ನಾನಾ ವಿಧಾನಿ ಕಾಷ್ಠಾನಿ ವಹ್ನಿಃ ಯೋಗಾದ್ಯ ಥೈಕತಾಂ " ಎಂಬ ಡೋಳ್ಳನ್ನು ಬಾರಿಸುತ್ತ ಶಾಸ್ತ್ರಿಗಳ ಸಮೂಹ

ನನ್ನೇ ಪಕ್ಷಯುಕ್ತ ಪ್ರಕಾಶಿಸುವದು ಈ. ಮ. ಪಾಟೀಲರಿಗೆ ಪ್ರಾಜ್ಞರಿಗೆ ಪ್ರಶಸ್ತವಲ್ಲ.

ಇನ್ನು ಶಿವದೀಕ್ಷಾ ಪ್ರಭಾವದಿಂದ ವರ್ಣಾಶ್ರಮ ಧರ್ಮಗಳು ನಾಶವಾಗುತ್ತವೆಂಬುದು ಪಾಟೀಲರ ಧ್ರುವೀಯುಕ್ತಿ ಶಾಸ್ತ್ರ ಸಮ್ಮತವಲ್ಲ. ನಿಮ್ಮ ಬದಾ ಹರಿಗೆ ಸೇರಲ್ಪಟ್ಟ ಮತ ಪ್ರಸಂಗಕ್ಕೆ ಕೊಟ್ಟ ಅರ್ಥವಾದವಲ್ಲದೆ ವಿಧಿವಾದವಲ್ಲವೆಂಬುದು ಗೊತ್ತಿದ್ದು. ಈ. ಮ. ಪಾಟೀಲರು ಬೆಕ್ಕು ಕಣ್ಣುಮುಚ್ಚಿ ಹಾಲು ಕುಡಿದಂತೆ ತಮಗೆ ವಿರೋಧವಾದವುಗಳನ್ನು ಕೈಸಂಧಿಯಲ್ಲಿ ಬಿಟ್ಟು ಬರೆದಿರುವದು ಅದು ಸರಿಯಾದದ್ದಲ್ಲ. ಶ್ರೀಪತಿ ಪಂಡಿತರು ಬರೆದ ಸೂತ್ರ ಭಾಷ್ಯದಲ್ಲಿಯ ಪ್ರಮಾಣ ಇಲ್ಲಿ ಕೊಟ್ಟಿರುವದು ನೋಡು—

ಶ್ಲೋಕ: " ಕರ್ಮ ನಿಷ್ಠಾಕ್ತ ಮುತ್ಸೃಜ್ಯ ಸ್ವಜಾತಿ ವಿಹಿತಂ ನರಾಃ । ಯೇರ್ಚಂತಿ
ಶಿವಂ ಕೇಚಿತ್ತಾಂ ಪೂಜಾಂ ಗೃಹ್ಣಾತಿ ನೇಶ್ವರಾಃ । ವರ್ಣಾಶ್ರಮ ಸದಾಚಾರಾಃ
ಶಿವೇನ ಕಥಿತಾಃ ಪುರಾ । ತಾನುಲ್ಲಂಘ್ಯ ವರ್ತಂತೇ ಶಿವಶಾಸ್ತ್ರಜ್ಞ ಪ್ರಲಾಪಿನಃ ।
ರಾಜಾಜ್ಞಾ ಭಂಗಕರ್ತೄಣಾಂ ದಂಡೋಽಪಿ ನರಕಸ್ತಥಾ ॥ "

ಯಾರು ವರ್ಣಾಶ್ರಮ ಧರ್ಮಗಳನ್ನು ಮೀರಿ ದೇವ ದೇವನಾದ ಪರಮೇಶ್ವರನನ್ನು ಪೂಜಿಸಲುಪಕ್ರಮಿಸುವರೋ ಅಂಥವರ ಪೂಜೆಯನ್ನು ಶಿವನು ಸ್ವೀಕರಿಸುವದಿಲ್ಲ. ವರ್ಣಾಶ್ರಮಾದಿ ಧರ್ಮಾನುಷ್ಠಾನವು ಶಿವನಿಂದ ಆಜ್ಞಾಪಿಸಲ್ಪಟ್ಟಿದೆಯಲ್ಲದೆ ಮಾನವರಿಂದಲ್ಲ. ಪ್ರಜಾಶಾಸಕನಾದ ಮಹಾರಾಜನ ಆಜ್ಞೆಯನ್ನು ಮೀರಿದ ಪ್ರಜೆಗಳು ಹೇಗೆ ಶಿಕ್ಷಾರ್ಹರಾಗುವರೋ ಹಾಗೆ ಶಿವಾಜ್ಞೆಯನ್ನು ಮೀರುವ ವರ್ಣಸಂಕರರಿಗೆ ನರಕವೆಂಬ ಶಿಕ್ಷೆಯು ತಪ್ಪದೆ ಆಗುವದೆಂದು ಸಿದ್ಧಾಂತವು ಒಂದು ಸಿಂಹಗರ್ಜನೆಯು ಮಾಡುತ್ತಿರುವದು ಮತ್ತು ಸೂತ್ರ ಭಾಷ್ಯಕಾರರಾದ ಶ್ರೀಪತಿ ಪಂಡಿತರು " ನಿಜಲಿಂಗ ಧಾರಣ ಮಾತ್ರೇಣ ಮುಕ್ತಿಸಂಭವೇತ್ತ್ರ ವೇದಾಗಮೋಕ್ತ ಮಾಸನ್ನಿಕ್ಷೇಪ್ತಾಸ್ತ್ರ ವಿಚಾರ ಪ್ರಯಾಸೇನೇತಿವಾಚಂ " ಲಿಂಗಧಾರಣ ಮಾತ್ರದಿಂದ ಮುಕ್ತಿಯು ಸಂಭವಿಸುವದಾದರೆ ಅತಿ ಕಠಿಣವಾದ ವೇದಾಗಮ ವಿಚಾರವೇನೆಂದು ಆಶಂಕೆ ಮಾಡಲಾಗದೆಂದು ವರ್ಣಾಶ್ರಮ ಧರ್ಮಾನುಷ್ಠಾನವಿಲ್ಲದೆ ಮುಕ್ತಿಯು ಸಂಭವಿಸಲಾರದೆಂದೂ ತಮ್ಮ ಶ್ರೀಕರ ಭಾಷ್ಯದಲ್ಲಿ ಉಲ್ಲೇಖಿಸಿದ್ದಾರಲ್ಲದೆ, ಲಿಂಗಧಾರಣ ರೂಪವಾದ ಶಿವ ದೀಕ್ಷೆಯು ಶಿವನಿರ್ದಿಷ್ಟವಾದ ವರ್ಣಾಶ್ರಮ ಧರ್ಮಾನುಷ್ಠಾನಗಳು ಯೋಗ್ಯ

ವೆಂದು ಹೇಳಿರುವರು. ಇನ್ನು ಪಾಟೀಲರು ಸಿದ್ಧಾಂತ ಶಿಖಾಮಣಿಯಲ್ಲಿರುವ ಅಪ್ರಾಕೃತ ವರ್ಣಾಶ್ರಮವನ್ನು ಪಾರಮೇಶ್ವರಾಗಮದ ೧೭ನೇ ಪಟಲವನ್ನು ಹೇಗೆ ಎಳೆದಾಡಿ ಗಾಯಗೊಳಿಸಿರುವರೆಂಬುದನ್ನು ನೋಡಿ, ನಿಷ್ಪಕ್ಷಪಾತ ಹೃದಯದ ಪಂಡಿತರಿಗೆ ವಿಷಾದವಾಗುತ್ತದೆ ಅಸ್ತು. ಶ್ರೀ ಜಗದ್ಗುರು ರೇಣುಕ–ಭಗವತ್ಪಾದರು ಅಗಸ್ತ್ಯ ಋಷಿಗಳಿಗೆ ಅಪ್ಪಣೆ ಕೊಡಿಸಿದ ಪ್ರಮಾಣವು ಇವರ ಪಾಲಿಗೆ ಎಷ್ಟು ವಿರೋಧವಾಗಿದೆಯಲ್ಲ, ಶಿವ ! ಶಿವ ! "ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾ ದ್ವಿವಿಧಾ ಮತಾ । ಏಕಾಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾ ಪರಾ ॥ ೩೫ ॥ ಶಿವೋಕ್ತ ಧರ್ಮನಿಷ್ಠಾತು ಶಿವಾಶ್ರಮ ನಿಷೇವಿಣಾಂ । ಶಿವ ಸಂಸ್ಕಾರ ಹೀನಾನಾಂ ಧರ್ಮಃ । ಪೈತಾಮಹಸ್ಮೃತಃ ॥ ೩೬ ॥ ಎಂಬಂತೆ ವರ್ಣಾಶ್ರಮಾದಿ ಧರ್ಮಗಳೊಳಗೂ ಎರಡು ತರದ ವ್ಯವಸ್ಥೆಯು ಇರುತ್ತಿರುವದು. ಅವುಗಳಲ್ಲಿ ಒಂದು ಶಿವನಿಂದ ಹೇಳಲ್ಪಟ್ಟಿದು; ಮತ್ತೊಂದು ಬ್ರಹ್ಮನಿಂದ ನಿರೂಪಿತವಾದದ್ದು. ಹೀಗೆ ಬರೆದದ್ದಕ್ಕೆ ಶಿವಸೃಷ್ಟಿ, ಬ್ರಹ್ಮಸೃಷ್ಟಿ ಸಮ ಇರಬಹುದಲ್ಲವೇ ಎಂದು ಬರೆದಿರುವಿರಿ. ಶಿವ ಸೃಷ್ಟಿ ನಿರ್ಮಿಸಲು ತೋರಿಸುವನಾದ್ದರಿಂದ ಕಡಿಮೆ, ಬ್ರಹ್ಮ ಮಾಡುತ್ತ ಹೆಚ್ಚಾಗಿರುತ್ತದೆ. ಶಿವನಿರ್ದಿಷ್ಟ ಚಾತುರ್ವರ್ಣಾಶ್ರಮಗಳು ವೀರಶೈವರಿಗೆ ಬ್ರಹ್ಮ ನಿರ್ದಿಷ್ಟ ವರ್ಣಾಶ್ರಮಗಳು ಪ್ರಾಕೃತರಿಗೆ ಯುಕ್ತವಾದದ್ದು. ಹೀಗೆ ಪ್ರಸಿದ್ಧಾರ್ಥವು ಇರುವದನ್ನು ಬಿಟ್ಟು ಪಾಟೀಲರು ಆ ಶ್ಲೋಕಕ್ಕೆ ಅಪಾರ್ಥವನ್ನು ಕಲ್ಪಿಸಹೋಗಿ ಆಳವಾದ ತಗ್ಗಿನಲ್ಲಿ ಮುಗ್ಗರಿಸಿ ಬಿದ್ದಿರುವರು. ವೀರಶೈವ ಮತವೆಂಬ ಸಾಮ್ರಾಜ್ಯದಲ್ಲಿರುವ ಸಕಲರಿಗೂ ವರ್ಣ ವಿಭಾಗವೂ ಜಾತಿ ವಿಭಾಗವೂ ಆಶ್ರಮ ವಿಭಾಗಗಳೂ ಸರ್ವೋತ್ಕೃಷ್ಟವಾಗಿ ಇರಬೇಕೆಂದು ಶಿವಾಜ್ಞೆಯ ನಿರೂಪಿತಗಳಾದ ಆಗಮೋತ್ತಮ ಉಪನಿಷತ್ತುಗಳು ಘಂಟಾಘೋಷವಾಗಿ ಸಾರುತ್ತಿದ್ದರೂ ಕೆಲವು ಪಂಡಿತರು ವೀರಶೈವ ಮಹಾತ್ಮೆಗಾಗಿ ಅಲ್ಲಲ್ಲಿ ಹೇಳಿದವುಗಳನ್ನು ಮುಂದುಮಾಡಿ ವರ್ಣಾಶ್ರಮಗಳಿಲ್ಲ ಎಂಬದಷ್ಟೇ ಅಲ್ಲ; ಉಳಿದ ಜಾತಿ ಸೂಚಕ ಕರ್ಮಗಳನ್ನು ಕೂಡ ತಿರಸ್ಕರಿಸುತ್ತಿರುವರು. ವೀರಶೈವ ಬ್ರಹ್ಮಣ ಕರ್ಮವನ್ನು ಪ್ರತಿಪಾದಿಸುವ ಪ್ರಮಾಣಗಳನ್ನು ಇಲ್ಲಿ ಕೊಟ್ಟಿರುವದು ನೋಡಿರಿ.

ಶ್ಲೋಕ: ವಕ್ಷ್ಯಾಮಿ ಧೃತಲಿಂಗಸ್ಯ ಚರಣಂ ಸ್ಮೃತಿ ಸಮ್ಮತಮ್ । ಸ್ಮೃತಿ ತಂತ್ರ
ಪುರಾಣೇಷು ಪ್ರಸಿದ್ಧಂತೆ ಸಮಾಸತಃ ॥ ೧ ॥ ಸ್ವತ್ಯಾಗ ಮೋದಿತಂ ಧರ್ಮಂ
ನಿತ್ಯ ನೈಮಿತ್ಯಕಾಶ್ರಮಮ್ । ಕುರ್ಯಾಲ್ಲಿಂಗಾಂಗ ಸಂಬಂಧೀ ಬ್ರಹ್ಮಣಃ

ಕಾಮ ವರ್ಜಿತಃ ।೨। ನಿಷ್ಕಾಮ ಕರ್ಮಾನುಷ್ಠಾನಾಚ್ಚಿತ್ ಶುದ್ಧಿರ್ಭವೇತ್ ಧ್ರುವಂ। ಚಿತ್ತಶುದ್ಧ್ಯಾ ಭವೇದ್ಭಕ್ತಿರವ್ಯಭಿಚಾರಿಣೀ ॥೩॥ ತಯಾ ಸಂಜಾಯತೇ ಜ್ಞಾನಂ। ನಿತ್ಯಂ ಜ್ಞಾನ ಮಾತ್ಮನಃ। ತಸ್ಮಾನ್ ಮೋಕ್ಷಸ್ತತೋ ಕರ್ಮ ನಿಷ್ಕಾಮಂ ಸಮ್ಯಗಾಚರೇತ್ ।೪। ತಸ್ಮಾದಾಚಾರ ಸಹಿತೋ ಭಕ್ತೋ ಮಾಹೇಶ್ವರೋ ಜನಃ। ಪೂಜಯೇದ್ಗುರುಣಾದತ್ತ ಮಿಷ್ಟಲಿಂಗಮತಂದ್ರಿತಃ ।೫

ಎಲೈ ಷಡಾನನನೇ ಲಿಂಗಧಾರಿಯು ನಿತ್ಯವೂ ಆಚರಿಸಬೇಕಾದ ವೈದಿಕಾಚಾರಗಳನ್ನು ಹೇಳುತ್ತೇನೆ. ಈ ಧರ್ಮಗಳು ಸ್ಮೃತಿ ಆಗಮ ಪುರಾಣಗಳಲ್ಲಿ ಪ್ರಸಿದ್ಧವಾಗಿರುತ್ತವೆ. ಲಿಂಗಾಂಗಿ ಸಂಗಿಯಾದ ಬ್ರಾಹ್ಮಣನು ವೇದಾಗಮಗಳಲ್ಲುಕ್ತವಾದ ನಿತ್ಯನೈಮಿತ್ತಿಕ ಕರ್ಮಗಳನ್ನು ನಿಷ್ಕಾಮ ಬುದ್ಧಿಯಿಂದ ಆಚರಿಸಬೇಕು. ಈ ರೀತಿಯಾದ ಆಚಾರಗಳಿಂದ ಕೂಡಿದ ಭಕ್ತಮಾಹೇಶ್ವರರು ಗುರುದತ್ತವಾದ ಇಷ್ಟಲಿಂಗವನ್ನು ಎಡೆಬಿಡದೆ ಪೂಜಿಸಬೇಕು; ಎಂದು ಬೋಧಿಸಿರುವ ಪ್ರಮಾಣ ವಾಕ್ಯಗಳಿಂದ ಬ್ರಾಹ್ಮಣಾದಿಗಳ ಕರ್ಮೋಪಾಸನೆಯು ಸ್ಪಷ್ಟವಾಗುವದು. ಇನ್ನು ಕರ್ಮ ಒಂದರಲ್ಲಿಯೇ ಆಸಕ್ತವಾಗಬೇಕೆಂಬುದು ನಮ್ಮ ಸಿದ್ಧಾಂತವಲ್ಲಿಲ್ಲ. ಕರ್ಮಜ್ಞಾನಗಳೆರಡನ್ನು ಅಂಗೀಕರಿಸುವದರಿಂದ ಅದೇ ಸಂಹಿತೆಯಲ್ಲಿ:

**ಶ್ಲೋಕ:** ಅನೇನ ಸದೃಶಂ ಧರ್ಮಂ ನ ಪಶ್ಯಾಮಿ ಷಡಾನನ। ವೇದತಂತ್ರ ಪುರಾಣೇಷು
ಸತ್ಯಂ ಸತ್ಯಂ ಮಯೋದಿತಂ ॥

ಎಲೈ ಕುಮಾರಸ್ವಾಮಿಯೇ, ಈ ಮತಕ್ಕೆ ಸಮಾನವಾದ ಮತವೇ ಇಲ್ಲ. ವೇದಾಗಮ ಪುರಾಣಗಳಲ್ಲಿ ನನ್ನಿಂದ ಹೇಳಲ್ಪಟ್ಟಿರುವದೇ ಸತ್ಯವು, ಎಂದು ಪರಮಾತ್ಮನ ಆಜ್ಞೆಯು. ಇರಲಿ, ವರ್ಣಾಶ್ರಮ ವಿಚಾರಕ್ಕಾಗಿ ಹೊರಟ ನಾವು ಪಾಟೀಲರ ವಿಚಾರಿಕಾ ಲೇಖವನ್ನು ಮರೆಯುವಂತಿಲ್ಲ. ಇವರು ಪಾರಮೇಶ್ವರಾಗಮದ ೧೭ನೇ ಪಟಲವನ್ನು ಅಷ್ಟಾವರಣ ಪಂಚಾಚಾರಯುಕ್ತರಾದ ಶುದ್ಧ ವೀರಶೈವರಲ್ಲಿ ಜಾತಿಭೇದವನ್ನು ಹೇಳುವದಿಲ್ಲ. ಶುದ್ಧಾದಿ ಶೈವರು ತಮ್ಮ ತಮ್ಮ ಮಾರ್ಗಗಳಲ್ಲಿ ವೀರಶೈವವನ್ನು ಅನುಸರಿಸಿದರೆ ಕ್ರಮೇಣ ಧನ್ಯರಾಗುವರೆಂಬುದು. ಹೀಗೆಂದು ಆ ಪಟಲದ ಅಭಿಪ್ರಾಯವಾಗಿದ್ದರೆ ಪಾಟೀಲರವರಿಗೆ ಶತಶ್ಯ ಧನ್ಯವಾದವು.

ಪಾರ್ವತಿಯು ಆ ಪಟಲದಲ್ಲಿ ವೀರಶೈವರೊಳಗಿನ ಭೇದಗಳನ್ನು ಕೇಳಿರು

ವಳ್ಳದೆ ಪಾಟೀಲರ ಒತ್ತಾಯದಿಂದ ಉಳಿದ ಶೈವಾದಿಗಳಲ್ಲಿರುವ ಭೇದಗಳನ್ನು ಕೇಳಿಲ್ಲ. ಇನ್ನು ಶೈವಾದಿ ಭೇದವೆಂದರೇನು ? ವೀರಶೈವಾದಿ ಭೇದವೆಂದರೇನು ? ಶೈವ ಸೃಷ್ಟಿಯೊಂದು ಬೇರೆ, ವೀರಶೈವ ಸೃಷ್ಟಿಯೊಂದು ಬೇರೆ. ಅದೇ ಪಾರಮೇಶ್ವರಾಗಮವನ್ನು ಆರಂಭದಿಂದ ಅವಲೋಕಿಸಿದರೆ ಎಷ್ಟು ಸೃಷ್ಟಿಗಳಿರುವವೆಂಬುದು ತಿಳಿಯುವದು. ಅದರಲ್ಲಿ ಜಗಜ್ಜನನಿಯಾದ ಪಾರ್ವತಿಯು ಲೋಕಹಿತಕ್ಕಾಗಿ ಮಾಡಿದ ಪ್ರಶ್ನೆಯ ಪರಾಭವವನ್ನು ಪರಮಾತ್ಮನು ಪಾರಮೇಶ್ವರಾಗಮದ ಮೂಲಕವಾಗಿ ವೀರಶೈವ ಮತದ ಹೆಚ್ಚುಗಾರಿಕೆಯನ್ನು ಕುರಿತು ಎಷ್ಟು ವಿಶದವಾಗಿ ಬೋಧಿಸಿರುವನೆಂಬವನ್ನು ವರ್ಣಿಸಲು ನಮ್ಮ, ಅಲ್ಲ; ಲೆಕ್ಕಣಿಕೆಯ ಸಾಮರ್ಥ್ಯವಿಲ್ಲ.

ಪಾರಮೇಶ್ವರಾಗಮದ ಪ್ರಥಮ ಪಟಲದಲ್ಲಿ ಪರಮಾತ್ಮನಿಗೆ ದೇವಿಯು ಸರ್ವಪ್ರಕಾರ ತಾತ್ವಿಕ ದೃಷ್ಟಿಯಿಂದ ಮತಭೇದ ಸ್ವರೂಪವನ್ನು ಹೇಳಬೇಕೆಂದು ಎಷ್ಟು ಪ್ರಕಾರದ ಮತಗಳಿರುವವೋ ಆಯಾಯ ಮತದ ಸ್ವರೂಪವನ್ನು ತಿಳಿಸಬೇಕೆಂದು ಪ್ರಶ್ನೆ ಮಾಡಿದ್ದಕ್ಕೆ ಪರಶಿವನು ಸೌಗತ, ಬೌದ್ಧ, ಚಾರ್ವಾಕ ಮೊದಲಾದವುಗಳನ್ನು ವೈದಿಕ ಮತಗಳಾದ ಸೌರ, ಗಾಣಪತ್ಯ, ವೈಷ್ಣವ ಶಾಕ್ತ್ಯಾದಿ ಮತಗಳನ್ನು ಹೇಳಿ ಅತ್ಯಂತ ಶ್ರೇಷ್ಠವಾದ ವೀರಶೈವ ಮತದಬಗ್ಗೆ:

ಶ್ಲೋಕ: ಅಥವಕ್ಷ್ಯೇ ಗಿರಿಸುತೇಮತಂ ಮಮ ಮಹತ್ತರಂ । ಶೈವಂ ಸಪ್ತವಿಧಂ ಪುಣ್ಯಂ ವೀರಶೈವಾದಿ ಭೇದತಃ ॥೧೫॥ ವೀರಶೈವಂ ತಥಾಸಾದಿ ಶೈವಮಾದಿ ಪರಂ ತತಃ । ಅನುಶೈವಂ ಮಹಾಶೈವಂ । ಯೋಗ ಶೈವಂತು ಷಷ್ಠಕಂ ॥೧೬॥ ಸಪ್ತಮಂ ಜ್ಞಾನಶೈವಾಖ್ಯಂ ತತ್ರ ಸರ್ವೋತ್ತಮೋತ್ತಮಂ । ವೀರಶೈವ ರೇಮಿತೀಶಾನಿ ತದಂಗಾನಿ ತರಾಣಿತು ॥೧೭॥

ಹೀಗೆ ವೀರಶೈವ ಸೃಷ್ಟಿಗೆ ಆರಂಭಮಾಡಿ ಅವರೊಳಗಿರುವ ಅನಂತಾನಂತ ಭೇದಗಳನ್ನು ವಿವರಿಸುತ್ತ ೧೭ನೇ ಪಟಲದಲ್ಲಿ ಮುಖ್ಯವಾಗಿ ವೀರಶೈವರೊಳಗೆ ಬ್ರಾಹ್ಮಣಾದಿ ಭೇದ ನಿರೂಪಣೆಯು ಸಿದ್ಧಾಂತವಾಗಿರುವದು. ಹೀಗಿದ್ದು ೧೭ ನೇ ಪಟಲವು ವೀರಶೈವರನ್ನುದ್ದೇಶಿಸಿ ಹೇಳಿದ್ದೆಂದು ಪ್ರಲಾಪಿಸುವದು ಪಾಟೀಲರ ಪಕ್ಷಾಂಧತೆಯಲ್ಲದೆ ಬೇರಿಲ್ಲ. ವರ್ಣಾಶ್ರಮ ವಿಹಿತವಾದ ವೀರಶೈವಮತದವರು ತಮ್ಮ ತಮ್ಮ ಕುಲಕ್ರಮಾಗತಾಚಾರದಂತೆ ವರ್ತಿಸಬೇಕೆಂದು ಸಿದ್ಧಾಂತಗಳು.

ಶ್ಲೋಕ: ಸ್ವಮಾರ್ಗಾಚಾರರತಾ: ಸಜಾತೀಯಾ ದ್ವಿಜಾಸ್ತುಯೇ ತೇಷಾಂ । ಗೃಹೇಷು ಭುಂಜೀತ ನೇತರೇಷಾಂ ಕದಾಚನ

ವೀರಶೈವ ಮತೀಯರು ಭೋಜನಾದಿಗಳನ್ನು ಅದೇ ವೀರಶೈವ ಮತದವರಲ್ಲಿ ಅಲ್ಲದೆ ಇತರ ಸ್ಥಿದವರಲ್ಲಿ ಮಾಡಬಾರದೆಂದು ವಿಧಿಸುತ್ತದೆ. ವರ್ಣಾಶ್ರಮ ವಿಭಾಗಗಳು ಜಾತಿ ತಾರತಮ್ಯವು ಬ್ರಹ್ಮಚರ್ಯಾದ್ಯಾಶ್ರಮಗಳು, ವೀರಶೈವ ಸಿದ್ಧಾಂತ ಗ್ರಂಥಗಳಲ್ಲಿ ಪ್ರಕಾಶಿತವಾಗಿರುವವು. ಅವುಗಳನ್ನು ಹುಡುಕುವ ಶ್ರಮವಾದರೂ ವಿಶೇಷವಿಲ್ಲ. ಆದರೆ ಪಕ್ಷಾಭಿಮಾನದಿಂದ ಅಂಥವುಗಳ ಗಳನ್ನೆಲ್ಲ ಬಿಟ್ಟು ಸ್ವಪಕ್ಷ ಸಮರ್ಥನೆಗಾಗಿ ನೋಡಿದರೆ ಅವು ಸಿಗಲಿಕ್ಕಿಲ್ಲ. ತಮ್ಮ ದೃಷ್ಟಿಯಿಂದ ದೊರೆತ ಪ್ರಮಾಣಗಳು ವಿಧಿವಾದವುಗಳೋ ? ಅರ್ಥವಾದವುಗಳೋ ? ಎಂಬುದನ್ನು ಸಂಪೂರ್ಣವಾಗಿ ವಿಚಾರಿಸಬೇಕು. ಹಾಗಿಲ್ಲದೆ ಪ್ರಶಂಸಾ ಪರವಾಗಿದ್ದ ಶ್ಲೋಕಗಳನ್ನೇ ವಿಧಿವಾದಗಳೆಂದು ತಿಳಿದರೆ ಎಷ್ಟು ವಿಪರೀತ ಫಲವುಂಟಾಗುವದು. ಇನ್ನು ರೂಢಿಯನ್ನು ನೋಡಬೇಕು. ಸಕಲಶಾಸ್ತ್ರ ಪ್ರಮಾಣಕ್ಕಿಂತಲೂ ರೂಢಿ ಎಂಬುದು ಪ್ರಬಲ ಪ್ರಮಾಣವು. ಅದ್ದರಿಂದ ವರ್ಣಾಶ್ರಮ ಜಾತಿ ವಿಮರ್ಶಕರು ಕೆಳಗಿನ ಮೂರು ಪ್ರಶ್ನೆಗಳನ್ನು ಪರಾಮರ್ಶ ಮಾಡಬೇಕು.

(೧) ಸದ್ಯದಲ್ಲಿ ವೀರಶೈವ ಮತದಲ್ಲಿ ಜಾತಿಭೇದಗಳು ಇರುವವೋ ? ಇಲ್ಲವೋ ?

(೨) ಆಯಾಯ ಜಾತಿಯವರು ವಿಶಿಷ್ಟಾಚರಣೆಗಳನ್ನು ಇಟ್ಟುಕೊಂಡಿರುವರೋ ಇಲ್ಲವೋ ?

(೩) ಜಾತಿಭೇದಗಳೇ ಇಲ್ಲವಾದರೆ ಈಗಿನ ವೀರಶೈವ ಮತದಲ್ಲಿ ಒಂದು ಜಾತಿಯವರು ಮತ್ತೊಂದು ಜಾತಿಯವರೊಡನೆ ಶರೀರ ಸಂಬಂಧ ಮಾಡಿರುವರೋ ಹೇಗೆ ?

ಉದಾ: ಕುಡ ಒಕ್ಕಲಿಗರಾದ ಶಿರಸಂಗಿ ದೇಸಾಯರು ತಮ್ಮ ಸಂಸ್ಥಾನವನ್ನು ವೀರಶೈವ ಸಮಾಜಕ್ಕೆ ಧಾರೆಯೆರೆದು ಕೊಟ್ಟಾಗ್ಯೂ ಮೊದಲು ಕುಡ ವಕ್ಕಲ ಜಾತಿಯವರಿಗೆ ಈ ಸಂಸ್ಥೆ ಹಣವನ್ನು ಮೊದಲು ಕೊಟ್ಟು ಹಿಂದಿನಿಂದ ಬಾಕಿ ಜಾತಿ ವಿದ್ಯಾರ್ಥಿಗಳಿಗೆ ವೇತನ ಕೊಡಬೇಕೆಂದು ತಮ್ಮ ಮೃತ್ಯುಪತ್ರದಲ್ಲಿ ಬರೆದಿಟ್ಟು ನೋಂದಾಯಿಸಲ್ಪಟ್ಟಿದೆ. ಆ. ಮ. ಪಾಟೀಲರೇ, ಇದನ್ನು ಮೊದಲು ತೆಗೆಸಿರಿ, ಹಿಂದಿನಿಂದ ಬಾಕಿ ಕೆಲಸ ಆಲೋಚಿಸುವಾ,

ಕಾರಣ ಒಂದೇ ಜಾತಿಯಲ್ಲಿ ಎಣಿಸಲ್ಪಡುವ ನಾಗಲೀಕ, ಶಿವಸಿಂಪಿಗ ಇವರು ಉಭಯರು ತಮ್ಮ ತಮ್ಮೊಳಗೆ ಶರೀರ ಸಂಬಂಧ ಮಾಡಿರುವರೋ ಹೇಗೆ? ಬಣಜಿಗ ಇವರಲ್ಲಿ ಶೀಲವಂತ, ಲೋಕಬಳಿಕೆ, ಆದಿಬಣಜಿಗ, ಪಂಚಮಶಾಲಿ, ಗಾಣಿಗ, ನೊಣಬ, ಹಡಪ, ಮಡಿವಾಳ, ಕುಡ ಒಕ್ಕಲಿಗ ಮುಂತಾದವರು ಪರಸ್ಪರ ಶರೀರಸಂಬಂಧ ಒತ್ತಟ್ಟಿಗಿರಲಿ, ಕೆಲವು ಮನೆಗಳಲ್ಲಿ ಭೋಜನವನ್ನು ಮಾಡುವರೋ? ಈ ಪ್ರಕಾರ ಮೇಲೆ ಬರೆದ ಪ್ರಶ್ನೆಗಳ ಅವಲೋಕನೆಯನ್ನು ವಿಚಾರಮತಿಗಳಾದ ವೀರಶೈವರು ವಿಚಾರಿಸಿ ವಿಶ್ವರೂಪಿಯಾದ ಪರಶಿವನ ಶಾಸನಗಳಾದ ಸಿದ್ಧಾಂತಾಚರಣೆಗಳನ್ನು ವರ್ಣಾಶ್ರಮ ಧರ್ಮಗಳನ್ನು ಪಾಲಿಸಿ ಪರಮೇಶ್ವರನ ಕೃಪೆಗೆ ಗದಗ ಶರಣ ಸೇವಾ ಸಂಘದವರು ಪಾತ್ರರಾಗಬೇಕೆಂದು ಕೋರುತ್ತೇನೆ.

**—ಗ್ರಂಥಕರ್ತ**

|| ಶ್ರೀ ಪಂಚಾಚಾರ್ಯಾಃ ಪ್ರಸೀದಂತು ||

# ಮಂತ್ರವಾದಿಗೆ ಮದ್ದು

ಶ್ಲೋಕ: ವಂದೇ ಶ್ರೀ ರೇಣುಕಾಚಾರ್ಯ ಮಹಾಚಾರ್ಯ ಪ್ರಥಮಂಗುರು |
ಕಾಯೇನ ಮನಸಾ ವಾಚಾ ನಿಜಾಚಾರೋಪಪತ್ತಯೇ ||



ಗದಗ "ಶರಣ ಸೇವಾಸಂಘ"ದ ಗ್ರಂಥಮಾಲೆಯ ಎರಡನೆಯ ಗ್ರಂಥದ ಪ್ರಕಾಶಕರೂ ಹಾಗು ಬರಹಗಾರರೂ ಆದ ಅ. ಮ. ಪಾಟೀಲ, ಬಿ. ಎ., ಎಲ್. ಎಸ್. ಜಿ. ಡಿ. ಮುನಸಿಪಲ್ ಮಾಧ್ಯಮಿಕ ಶಾಲಾ ಶಿಕ್ಷಕರು ಗದಗ ಇವರು ಬರೆದ ಗ್ರಂಥವನ್ನು ಪೂರ್ಣ ಓದಿ ನೋಡಿದೆವು. ಆದರೆ ಇದರಲ್ಲಿ ಮತ ಸುಧಾರಣೆ ಇಲ್ಲದೆ, ಒಬ್ಬರಿಗೊಬ್ಬರ ಈರ್ಷೆ ಹೆಚ್ಚಿಸುವ ಲೇಖನಗಳಿಂದ ತುಂಬಿ ತುಳುಕುತ್ತಿದೆ. ಈ ಸಂಘದವರು ವರ್ಣಾಶ್ರಮ ಧರ್ಮಗಳೇ ಇಲ್ಲವೆಂದು ಸಾಧಿಸಿ, ತಾವೇ ಅತಿ ವರ್ಣಾಶ್ರಮ ಧರ್ಮಿಗಳೆಂದು ತಮ್ಮಷ್ಟಕ್ಕೆ ತಾವೇ ಜಂಗಮರಾಗಿ ಲಿಂಗ ವನ್ನು ಕಟ್ಟಿಕೊಂಡು ಮನಬಂದಂತೆ ಆಚರಿಸುವ ಪೆಂಡಾರಿಗಳೆನ್ನಲು ಯಾವ ಅಡ್ಡಿ ಇಲ್ಲ. ಈ ಶರಣ ಸೇವಾಸಂಘದವರು ಪದ್ಧತಿಯನ್ನು ಮೀರಿ ಸನಾತನ ಧರ್ಮಕ್ಕೆ ಚ್ಯುತಿಯನ್ನೀಯುತ್ತ ವೀರಶೈವರನ್ನು ಅಡ್ಡದಾರಿಗೆಳೆದೊಯ್ಯುವ ಇವರ ಲೇಖನವನ್ನು ಖಂಡಿಸುವದೇ ನಮ್ಮ ಧ್ಯೇಯವಾಗಿದೆ.

ಮಾಹೇಶ್ವರರು, ಜಂಗಮರು, ಗಣಾಧೀಶ್ವರರು, ಗುರುಸ್ಥಲದವರು, ಅಯ್ಯನವರೆಂಬ ಹಲವು ನಾಮಗಳುಳ್ಳ ಮಠದಯ್ಯನವರು ಇಲ್ಲಿಯ ಪರ್ಯಂತರ ವೀರಶೈವ ಭಕ್ತಾದಿಗಳಿಗೆ ಲಿಂಗಧಾರಣ, ನಾಮಕರಣ, ಅನ್ನಪ್ರಾಶನ, ಚೌಲ, ಅಕ್ಷರಾಭ್ಯಾಸ, ದೀಕ್ಷಾ-ವಿವಾಹಾದಿಗಳನ್ನು ವೀರಶೈವ ದಶಕರ್ಮ ಪದ್ಧತಿಯಂತೆ ಮಾಡಿಸುತ್ತ ಬಂದಿದ್ದಾರೆ. ಮುಂದಾದರೂ ಇವರೇ ಮಾಡುವವರು,

ವೀರಶೈವ ಮತದಲ್ಲಿ ಜಾತಿ – ಭೇದವಿಲ್ಲವೆಂದು ತಿಳಿದರೆ, ರೇಣುಕಾ ಚಾರ್ಯರು ಅಗಸ್ತ್ಯಮಹಾಮುನಿಗೆ " ಭಕ್ತಿಮಾರ್ಗ ಕ್ರಿಯಾ ಪ್ರಕರಣ " ದಲ್ಲಿ ಕೆಳಕಂಡ ಶ್ಲೋಕವನ್ನು ಹೇಳಿದರೇಕೆ ?

ಶ್ಲೋಕ: ಸ್ವಮಾರ್ಗಾಚಾರ ವರ್ತಿಭ್ಯಸ್ಸಜಾತಿ ಭ್ಯಶ್ಶಿವವ್ರತೀ ।
ದದ್ಯಾತ್ತೇಭ್ಯ ಸ್ವಸಂಬಧ್ಯಾತ್ಕನ್ಯಾಂ ಕುಲಸಮುದ್ಭವಾ ॥

ವೀರಶೈವನು ಸಾಂಪ್ರದಾಯದ ಆಚಾರಗಳುಳ್ಳ ಸ್ವಜಾತಿಯವರಲ್ಲಿ ಕನ್ಯಾ ತರಬೇಕು; ಹಾಗು ಕೊಡಬೇಕೆಂಬುವದೇ ಇದರ ತಾತ್ಪರ್ಯ.

ವೀರಶೈವ ಮತದಲ್ಲಿ ಜ್ಞಾನಿಗಳಾದ ಆರೂಢರಿಗೆ ಮಾತ್ರ ಜಾತಿ – ಭೇದ ಗಳಿಲ್ಲ. ಈ ತತ್ವವು ಶುದ್ಧಾದ್ವೈತ ಮತದಲ್ಲಿಯೂ ವಿಶಿಷ್ಟಾದ್ವೈತ ಮತ ದಲ್ಲಿಯೂ ಉಂಟು. ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ, ಆರೂಢ ಎಂಬ ಐದು ತರಗತಿಗಳೊಳಗೆ ಸದಸ್ವೃತ್ತಿಶೂನ್ಯರಾಗಿ ಲಿಂಗಾಂಗ ಸಾಮ ರಸ್ಯ ಪ್ರಭಾವದಿಂದ ಶಿವತತ್ವವನ್ನು ಪಡೆದು, ಪ್ರಪಂಚವನ್ನು ಮರೆದಿರುವ ಉತ್ತಮ ವರ್ಣದ ಆರೂಢರು ಮಾತ್ರ ಸಮಾನ ಧರ್ಮವುಳ್ಳ ನೀಚವರ್ಣದವ ರಲ್ಲಿ ಜಾತಿಯ ಭೇದ ಮಾಡಬಾರದೆಂಬುವದು ಸಿದ್ಧಾಂತವು. ಯಾಕಂದರೆ: ಜಾತಿ, ಆಶ್ರಮ, ಕುಲ-ಗೋತ್ರ ಮೊದಲಾದವುಗಳು ಕಲ್ಪಿತವಾಗಿರುವದರಿಂದ, ಸತ್ಯದಲ್ಲಿ ಸತ್ಯಜ್ಞಾನಾನಂದ ರೂಪವಾದ ಶಿವನಲ್ಲಿ ಲೀನವಾದವರಿಗೆ ಮಾತ್ರ ಜಾತಿ, ಆಶ್ರಮ ಮೊದಲಾದ ಭೇದಗಳೇ ತೋರುವದಿಲ್ಲ. ಈ ಅಭಿಪ್ರಾಯ ವನ್ನೇ ಷಡಕ್ಷರ ಮಂತ್ರಿ ವಿರಚಿತ " ವೀರಶೈವ ಧರ್ಮಶಿರೋಮಣಿ " ನಿರೂಪಿಸಿದೆ.

ಶ್ಲೋಕ: ಯಥಾಹಿ ರಜತಂ ತಾಮ್ರಂ ರಸೇಯೋಗಾತ್ಸು ವರ್ಣತಾಂ ।
ತಥಾ ಶಿವಜ್ಞಾನ ರಸಾಚ್ಛೂದ್ರಾದಿ ಶಿವತಾಂ ವ್ರಜೇತ್ ॥
ಇತಿ ಸೂಕ್ಷ್ಮಾಗಮ ವಚನೈರ್ಲಿಂಗ ಧಾರಿಣಾಂ ಶಿವತ್ವಮೇ ವಾಭಿಹಿತಃ ।
ಅಯಮೇವಾರ್ಥಃ ಪಾರಮೇಶ್ವರಾಗ ಮೇಽಪಿ ಸೂಚಿತಃ ॥
ನ ತತ್ರ ಜಾತಿ ಭೇದೋಽಸ್ತಿ ನ ಶುಚ್ಯಶುಚಿ ಕಲ್ಪನಾ ।
ಮಲ್ಲಿಂಗ ಧಾರಣಾದೇವ ಮದ್ರೂಪ ಏವತೇಶಿಮೇ ॥
ಭಕ್ತಿಮಾತ್ರ ಪವಿತ್ರಾಹಿ ಸರ್ವ ಏವಾಧಿಕಾರಿಣಃ ।
ಸರ್ವೇಽಪಿ ವೀರಶೈವೇಸಿತು ರೀಯಾಃ ಪರಿಕೀರ್ತಿತಾಃ ॥

ಹೀಗಿರುವಲ್ಲಿ, ಶಿವೈಕ್ಯ ಸಿದ್ಧಿಯಂ ಪಡೆಯದೆ ಲೌಕಿಕ ವೃತ್ತಿಗಳಿಂದ ಉಪಜೀವಿಸುತ್ತಿರುವ ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ ಎಂಬ ತರ

ಗತಿಯ ಲಿಂಗಧಾರಿಗಳಲ್ಲಿ ಜಾತಿ ಭೇದವ ಬಿಟ್ಟು ನಡೆದವರು ಪಾಷಂಢರೂ ವೀರಶೈವ ಮತದ್ರೋಹಿಗಳೂ ಆಗುವರೆಂದು ಶಾಸ್ತ್ರಗಳು ಸಾರುತ್ತಿವೆ. ಹಾಗೂ ಬಸವಾದಿ ಪ್ರಮಥರ ವಚನಗಳನ್ನು ಕೂಡ ನೋಡಿರಿ. "ಪ್ರಭುಲಿಂಗ ಲೀಲೆ" ಯಲ್ಲಿಯ ಅಧ್ಯಾಯ ೨೪, ಶ್ಲೋಕ ೧೨೭.

ಶ್ಲೋಕ: ಕುಲಾಕುಲತ್ವೇ ನಹಿ ವೀರಶೈವಂ । ದ್ವಿಧಾವಿ ಭಿನ್ನಂ ಕಾಲವಮಾರ್ಗನಿಷ್ಠೈ ॥
ಯೋದೇವ ಲಿಂಗಾಂಗಿ ಭಿರಾಶ್ರಿತಂ ಸ್ಯಾ । ಚ್ಛಿವೋಕ್ತ ರಿತ್ಯಾತ್ಯಕುಲವೀರ ಶೈವಂ ॥

ಕುಲ ಮತ್ತು ಅಕುಲವೆಂಬ ಭೇದದಿಂದ ವೀರಶೈವ ಮತವು ಎರಡು ಪ್ರಕಾರವಾಗಿದೆ. ಕುಲಮಾರ್ಗನಿಷ್ಠರಾದ ಲಿಂಗಾಂಗಿಗಳಿಂದ ಯಾವದು ಆಶ್ರಯಿಸಲ್ಪಡುವದೋ ಅದು ಶಿವೋಕ್ತ ರೀತಿಯಾಗಿ ಕುಲಪ್ರಸಿದ್ಧವಾಗಿದೆ.

ವಚನ: ಆಡಿದರೆ ಸದಾಚಾರಿಗಳೊಡನಾಡುವದು । ನುಡಿದರೆ ಸದಾಚಾರಿಗಳೊಡನೆ ನುಡಿಯುವದು । ಕೂಡಿದರೆ ಲಿಂಗಸಂಗಿಗಳೊಡನೆ ಕೂಡುವದು । ಲಿಂಗ ನಿಷ್ಠೆಯಿಲ್ಲದವರ ಅಂಗಳವ ಮೆಟ್ಟಲಾಗದು । ಗುರುವಿನಲ್ಲಿ, ಜಂಗಮರಲ್ಲಿ ಪ್ರೀತಿ-ಪ್ರೇಮವಿಲ್ಲದವರೊಡನೆ ಮಾತನಾಡಲಾಗದು । ಜಾತಿಹೀನರ ಕೂಡ ಸಹ ಪಂಕ್ತಿಯಲ್ಲಿ ಕುಳಿತು ಪ್ರಸಾದ ಭೋಜನ ಮಾಡಲಾಗದು । ಇಂತಪ್ಪ ಭಕ್ತಿಹೀನರ ಕಂಡು ಮನಮುನಿಸು ಮಾಡಿಸಯ್ಯಾ ರೇಕಣ್ಣ ಪ್ರಿಯನಾಗನಾಥ ॥ ೧ ॥

ಪ್ರಮಥರ ಈ ವಚನವನ್ನು ಅ. ಮು. ಪಾಟೀಲರು ಕಣ್ದೆರೆದು ನೋಡಿದಂತೆ ಕಾಣಿಸುವದಿಲ್ಲ. ವೀರಶೈವ ಧರ್ಮಗ್ರಂಥಗಳಾದ ಶಿವಾದ್ವೈತ ಮಂಜರಿ, ಅನುಭವ ಸೂತ್ರ, ವಿಶೇಷಾರ್ಥ ಪ್ರಕಾಶಿಕೆ, ಲಿಂಗಧಾರಣ ದೀಪಿಕೆ, ಲಿಂಗಧಾರಣ ಚಂದ್ರಿಕೆ, ವೀರಶೈವಧರ್ಮ ಶಿರೋಮಣಿ, ವೀರಶೈವ ಚಿಂತಾಮಣಿ, ವೀರಶೈವಾಭ್ಯುದಯ, ವೀರಶೈವ ಸರ್ವೋತ್ಕರ್ಷ ಪ್ರದೀಪಿಕೆ, ಶೃತಿಸಾರ ಭಾಷ್ಯ, ಪಂಡಿತಾರಾಧ್ಯ ಚರಿತ್ರೆ, ವೀರಶೈವ ಪ್ರದೀಪಿಕೆ, ಶಾಂಕರ ಸಾರೋದ್ಧಾರ, ವೀರಮಾಹೇಶ್ವರಾಚಾರ ಸಂಗ್ರಹ ಮೊದಲಾದವುಗಳನ್ನವಲೋಕಿಸಿದರೆ, ತಮಗೆ ಬೇಕಾದ ಸ್ಥಲಕಟ್ಟಿನ ವಚನಗಳನ್ನು ಆಯ್ದು, ತಮ್ಮ ಮನಸ್ಸಿಗೆ ಬಂದಂತೆ ಬರೆದ "ಮಂತ್ರವಾದಿ" ಎಂಬ ಗ್ರಂಥವು ಮಾನ್ಯವಾಗಲಾರದು. ಯಾವ

ಧರ್ಮದ ಪಂಡಿತರೂ ಪಾಮರರೂ ಒಪ್ಪಲಾರರು. ಒಬ್ಬ ಪ್ರತಿಷ್ಠಿತ ಪಂಡಿತರು ಮಾತ್ರ ನಿಮ್ಮ ಗ್ರಂಥಕ್ಕೆ ಮುನ್ನುಡಿ ಬರೆದಿರುವರು. ಪಂಚಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಮಠದಯ್ಯನವರ ಕುಲವನ್ನು ನಾಶಮಾಡಬೇಕೆಂಬ ಹಟದಿಂದಲೂ ಅಹಂಕಾರದಿಂದಲೂ ಅಸೂಯೆತನದಿಂದಲೂ ಕಪಟ ಭಾವದಿಂದಲೂ ಕಲ್ಪಿಸಲ್ಪಟ್ಟ ನಿಮ್ಮ ಗ್ರಂಥವು ಮಳೆಗಾಲದಲ್ಲಿ ಹುಟ್ಟಿದ ಚಿಟ್ಟೆಗಳಂತೆ ಕೆಲವು ದಿನ ಸ್ವೈರಗಳನ್ನು ಕಡಿದು, ಬಂದಿನಿಂದ ನಾಶವಾಗುವಂತೆ ನಾಶವಾಗದೆ ಉಳಿಯಲಾರವು. ಹಾರ್ಮೋನಿಯಂ ಪೆಟ್ಟಿಗೆಯನ್ನು ಅಭ್ಯಾಸವಿಲ್ಲದವನು ಬಾರಿಸಿದರೆ ಅಪಸ್ವರದಿಂದ ಕಿವಿಗೆ ಜಿಗುಪ್ಸೆಯನ್ನುಂಟು ಮಾಡುವಂತೆ ನಿಮ್ಮ ಗ್ರಂಥವು ವೀರಶೈವರ ಮನಸ್ಸಿಗೆ ನೋವನ್ನುಂಟು ಮಾಡದೇ ಇರದು. "ಕೊಂದಕೊಲ್ಲಿ, ನೊಂದನೋವು ಎಂದಿಗೂ ಬಿಡದೋ ಬಸವಣ್ಣ" ಎಂಬ ಗಾದೆಯಂತೆ ನಿಮ್ಮ ಸಂಘವು ಜಂಗಮರ ಮನಸ್ಸಿನ ನೋವಿನಿಂದ ನಾಶವಾಗದೆ ಉಳಿಯಲಾರದು. ಇಲ್ಲಿಯ ಪರ್ಯಂತರ ವೀರಶೈವರು ಗುರುಸ್ಥಲದ ಮಠದಯ್ಯನವರಿಗೆ ಗೌರವವನ್ನು ಕೊಡುತ್ತ ಬಂದಿದ್ದಾರೆ. ಹಾಗು ತಮ್ಮ ನಿಜ ವರ್ಣಾಶ್ರಮ ಧರ್ಮಗಳನ್ನು ಬಿಡದೆ, ಗ್ರಹಸ್ಥಾಶ್ರಮಿಗಳೆಲ್ಲರೂ ಧರ್ಮಶಾಸ್ತ್ರ ಪದ್ಧತಿಯ ಪ್ರಕಾರ ಸೂತಕಾದಿ ಹೊಲೆಗಳನ್ನು ಆಚರಿಸುತ್ತ ಬಂದಿದ್ದಾರೆ. ದೇಶಾಚಾರ, ಜಾತ್ಯಾಚಾರ, ಮತಾಚಾರ, ಕುಲಾಚಾರ, ಕೂಟಾಚಾರ, ಶಿಷ್ಟಾಚಾರ, ವೃದ್ಧಾಚಾರ, ಗಣಾಚಾರ ಸಾಂಪ್ರದಾಯಗಳನ್ನು ಬಿಟ್ಟಿದ್ದಾದರೆ, ಮಹಾಪಾತಕ ಬರುವದೆಂದು ನಿಜಗುಣ ಶಿವಯೋಗಿಗಳು ತಮ್ಮ "ವಿವೇಕ ಚಿಂತಾಮಣಿ"ಯಲ್ಲಿ ಹೇಳಿರುವರು. ಕೆಳದಿ ಸಂಸ್ಥಾನದಲ್ಲಿ ಮಹಾಪಂಡಿತನೆನಿಸಿದ ಮೌನಪ್ಪನೆಂಬ ವಿದ್ವಾಂಸನು ಬರೆದ "ಮರಿತೋಂಟದಾರ್ಯರು ವೀರಶೈವಾಚಾರ ಕೌಸ್ತುಭ"ವೆಂಬುದರಲ್ಲಿಯೂ ಹೇಳಿರುವರು.

**ಪ್ರಶ್ನೆ:** ನಿಮ್ಮ ಮಂತ್ರವಾದಿ ಗ್ರಂಥದಲ್ಲಿ "ಲಿಂಗಾಂಗಿಗಳಲ್ಲಿ ಕುಲಾಭಿಮಾನ ತಾಳಿರುವರು" ಎಂದು ಬರೆದಿದ್ದೀರಿ.

**ಉತ್ತರ:** ನಾವು ಕುಲಾಭಿಮಾನ ತಾಳಿ ಬರೆದದ್ದಲ್ಲ. ಪೂರ್ವದ ಮಠಸ್ಥಾಪಕರು ಈ ಮಠದಲ್ಲಿ ಹುಟ್ಟಿದ ನಿಷ್ಪಕ್ಷಪಾತರಾದ ಮಹಾವಿದ್ಯಾವಂತರು ಬರೆದ ಗ್ರಂಥಗಳಲ್ಲಿಯ ವಾಕ್ಯಗಳನ್ನು ಕೊಟ್ಟಿರುವೆನು ನೋಡಿರಿ. ಸ್ಕಂದ ಪುರಾಣ ವೀರಮಾಹೇಶ್ವರ ಪ್ರಶಂಸೆ ೯೧ನೇ ಅಧ್ಯಾಯ ೬೯ನೇ ಶ್ಲೋಕ.

ಶ್ಲೋಕ: ವತ್ಸತೇ ಗಣಾನಾಯಕಃ ಕ್ಷಿತಿತ ಲಿಂಗತ್ವಾಸಿ ಯುಕ್ತಾ ಮಯಾ |
ಸಂಭೂತಾಸ್ಸಕಲಾ ಸುಜಾತಿಷು ಪುನರ್ಲಿಂಗಾರ್ಚನ ತತ್ಪರಾಃ |
ಸಂಸ್ಥಾಪ್ಯೋತ್ತಮ ವೀರಶೈವ ಪದವೀಂ ಲೋಕೇಹಿತಾರ್ಥಂ ನೃಣಾಂ ।
ಮುದ್ರಾಃ ಪಂಚವ ಹಂತ ಏವವಿಚರಂತ್ಯಂತಿ ಸಮೇಷ್ಯಂತಿವಾ ।

ಇದೇ ವೀರಮಾಹೇಶ್ವರ ಪ್ರಶಂಸೆ ೯೩ನೇ ಅಧ್ಯಾಯ ೧೧೪ನೇ ಶ್ಲೋಕ. ಸೂತ ಪುರಾಣಿಕರು ಶೌನಿಕಾದಿ ಮಹಾಮುನಿಗಳಿಗೆ ಹೇಳಿದ್ದನ್ನೇ ಇಲ್ಲಿ ಉದಾಹರಿಸಿದೆ.

ಶ್ಲೋಕ: ಧರ್ಮಗ್ಲಾನಿ ರಭೂದ್ಯದಾಶಿವ ಗಣಾನಾನಾಕುಲೇ ಷೂತ್ಥಿತಾ |
ಭೂ ಮೌಶಂಕರನಿಂದ ಕಾನಘವ ತಸ್ತೆದ್ಧರ್ಮ ವಿಧ್ವಂಸಕಾನ್ |
ಶಿಕ್ಷಂತಶ್ಶಿವ ಧರ್ಮ ಮಾರ್ಗಮಖಿಲಂ ಸಂಸ್ಥಾಪ್ಯ ಲಿಂಗಾರ್ಚಕಾನ್ |
ಸತ್ಕೃತ್ವಾ ಸಕಲಾನ್ ಜನಾನಿಹ ಪುನಶ್ಶಂಭುಂ ನ ಮೇಕ್ಷ್ಯಂತಿ ತೇ ॥ ೧ ॥

ಈ ರೀತಿಯಲ್ಲಿ ಆಗಿನ ಪರಂಪರೆಯ ಬ್ರಾಹ್ಮಣಾದಿಗಳೇ ವೀರಶೈವರು. ಪ್ರಾಕೃತ ಬ್ರಾಹ್ಮಣಾದಿಗಳಿಗೆ ಶೈವ ಮತಾಚಾರ್ಯರಾದ ಕೌಶಿಕ ಮುಂತಾದ ಋಷಿ ಗೋತ್ರಗಳೇ ಮುಖ್ಯವಾದವು. ಗಣವಂಶಜರಾದ ಬ್ರಾಹ್ಮಣಾದಿಗಳಿಗೆ ರೇಣುಕಾದಿ ಶಿವಾಚಾರ್ಯರ ಗೋತ್ರಗಳೇ ಪ್ರಸಿದ್ಧವಾಗಿ ಬಂದವು. ಮೊದಲೇ ಶೈವ ಮತಸ್ಥರಾಗಿದ್ದ ಬ್ರಾಹ್ಮಣರೇ ಈಚೆಗೆ ವೈಷ್ಣವಾದಿ ಮತಗಳನ್ನು ಅವಲಂಬಿಸಿದಾಗ್ಯೂ ಗೋತ್ರಗಳು ಮಾತ್ರ ಬೇರೆಯಾಗಿಲ್ಲ. ಒಂದು ವೇಳೆ ಬೇರೆಯಾಗಿದ್ದರೂ ಶೈವ ಋಷಿಗಳ ಉಪ ಗೋತ್ರಗಳಿರುತ್ತವೆ. ಈ ಕಾರಣದಿಂದ ಬ್ರಾಹ್ಮಣರಲ್ಲಿ ಋಷಿ ಗೋತ್ರದ ಬ್ರಾಹ್ಮಣರೇ ಗುರುವಾಗಿದ್ದಾರೆ. ಲಿಂಗಧಾರಿಗಳಾದ ಕ್ಷಾತ್ರ ಅಂದರೆ ರಾಜಮಹಾರಾಜಾದಿಗಳಿಗೆ ಶಿವಾಚಾರ್ಯ ಗೋತ್ರದ ಬ್ರಾಹ್ಮಣರೇ ಗುರುವಾಗಿದ್ದಾರೆ. ವೀರಶೈವ ಮತದಲ್ಲಿ ಪ್ರತಿಯೊಬ್ಬನಿಗೂ ಗುರುವು ಪಂಚಾಚಾರ್ಯ ವಂಶಸ್ಥರೇ. ಶಿವಾಚಾರ ಸಾಂಪ್ರದಾಯವನ್ನು ಹಿಡಿದುಬಂದ ವೀರಶೈವ ಬ್ರಾಹ್ಮಣರಿಗೆ ಲಿಂಗಧಾರಣ ಸಂಸ್ಕಾರ, ಗರ್ಭಧಾರಣಾದಿ ದಶಕರ್ಮ ಸಂಸ್ಕಾರಗಳನ್ನು ಮಾಡುವ ಅಧಿಕಾರ ಮತ ಹುಟ್ಟಿದಾಗಿನಿಂದಲೂ ಇಲ್ಲಿ ಪರ್ಯಂತರ ಈ ಮತಸ್ಥರೇ ಮಾಡುತ್ತಾರೆ.

**ಪ್ರಶ್ನೆ:** ಭಕ್ತರು ಅಯ್ಯನವರಾಗಲು ದೀಕ್ಷೆಯನ್ನು ಹೊಂದಲು ಹೇಳುವದು ಹಾಸ್ಯಾಸ್ಪದವೆಂದೂ ದೀಕ್ಷಾವಿಧಿ ಕ್ರಮಗಳನ್ನು ಯಾರೂ ಕಂಡಿಲ್ಲವೆಂತಲೂ ತಮ್ಮಲ್ಲಿದ್ದರೆ ಕಳಿಸಿರೆಂದರೆ ಯಾರೂ ಕಳಿಸಲಿಲ್ಲವೆಂತೆ.

ಜಂಗಮಕ್ಕೆ ಇಲ್ಲಾ. ಆದರೆ ಗುರುಸ್ಥಲದ ಪಟ್ಟಾಧಿಕಾರಿಗಳು ಸಿಗದಿದ್ದರೆ ದೇಶಿಕರು ದೀಕ್ಷಾಕಾರ್ಯ ಮಾಡಬೇಕೆಂದು ಶಾಸ್ತ್ರ ಹೇಳುತ್ತಿದ್ದು, ನಿಮ್ಮಂಥ ಅನಧಿಕಾರ ಸಂಘಕ್ಕೆ ದೀಕ್ಷಾ ಮಾಡುವ ಅಧಿಕಾರವೇ ಇಲ್ಲ.

ಶ್ಲೋಕ: ದೀಯತೆ ಜ್ಞಾನಸಂಬಂಧಃ ಕ್ಷೀಯತೇಚ ಮಲತ್ರಯಂ ।
ದೀಯತೆ ಕ್ಷೀಯತೆ ಯಸ್ಮಾತ್ಸಾ ದೀಕ್ಷೇತಿ ನಿಗದ್ಯತೆ ॥

ಎಂಬ ನಿರುಕ್ತಿಗನುಸಾರವಾದ ದೀಕ್ಷೆಯು ವೇದ, ಕ್ರಿಯ, ಮನು ಎಂಬ ದೀಕ್ಷಾತ್ರಯವನ್ನು ಗುರುವಾದವನು ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಮೂರು ತನುಗಳಲ್ಲಿರುವ ಆಣವ, ಮಾಯಾ, ಕಾರ್ಮಿಕ ರೂಪವಾದ ಮಲತ್ರಯವೆಂಬ ಕಾಷ್ಠಗಳನ್ನು ಹಿಂದೆ ಹೇಳಿದ ತ್ರಿವಿಧ ದೀಕ್ಷೆಯೆಂಬ ಅಗ್ನಿಯಿಂದ ಸುಟ್ಟು ಇಷ್ಟ ಲಿಂಗ, ಪ್ರಾಣಲಿಂಗ, ಭಾವಲಿಂಗಗಳೆಂಬ ಮೂರು ಲಿಂಗಗಳನ್ನು ನೆಲೆಗೊಳಿಸುವನು. ಈ ಪ್ರಕಾರ ಶೋಧಮಾಡಿ, ವೀರಶೈವ ಮತಸ್ಥಾಪನಾಚಾರ್ಯರು ದೀಕ್ಷಾವಿಧಿಯನ್ನು ವಂಶಪರಂಪರೆಯಿಂದ ಬಳಕೆಯಲ್ಲಿ ತಂದಿದ್ದಾರೆ.

ವಿಶೇಷ ವೀರಶೈವರೇ ಷಡಧ್ವಶೋಧನ ಪೂರ್ವಕವಾದ ಶಿವದೀಕ್ಷಾ ಸಂಸ್ಕಾರವೆಂತಲೂ ಸಾಮಾನ್ಯ ವೀರಶೈವರಿಗೆ ಅಧ್ವಶುದ್ಧಿಯಿಲ್ಲದ ಸಂಸ್ಕಾರ ವೆಂತಲೂ ಕ್ರಿಯಾಸಾರ ಗ್ರಂಥದಲ್ಲಿ ಪ್ರಮಾಣ ವಚನಗಳಿರುವವು.

ಶ್ಲೋಕ: ತೇಯೋಗ್ಯಾಸ್ಸತತಂ ಶುದ್ಧಾ ಶಿವಸಂಸ್ಕಾರ ಕರ್ಮಣಿ ।
ಅಹಿಂಸಕಾದಯಾವಂತೋ ನಿತ್ಯ ಮುದ್ಯುಕ್ತ ಚೇತಸಃ ।
ಅಮಾನಿನೋ ಬುದ್ಧಿಮಂ ತಸ್ತ್ಯಕ್ತ ಸ್ಪರ್ಧಾಃ ಪ್ರಿಯಂವದಾಃ ।
ರುಜವೋ ಮೃದವಸ್ಸ್ವಚ್ಛಾ ವಿತಾಸ್ಥಿರ ಚೇತಸಃ ।
ಶೌಚಾಚಾರ ಸಮೋಪೇತಾ ಶ್ಶಿವಭಕ್ತಾ ದ್ವಿ ಜಾತಯಃ ।
ಏವಂ ವೃತ್ತ ಸಮೋಪೇತ್ ವಾಙ್ಮನಃ ಕಾಯಕರ್ಮಭಿಃ ।
ಶೋಧ್ಯಾ ಬೋಧ್ಯಾಯಥಾನ್ಯಾಯ ಮಿತಿಶಾಸ್ತ್ರ ವಿನಿಶ್ಚಯಃ ।
ಶೂದ್ರಾಣಾ ಮನ್ಯಜಾತಿನಾಂ ಪತಿತಾನಾಂ ವಿಶೇಷತಃ ।
ತಥಾ ಸಂಕರ ಜಾತಿನಾಂ ನಾದ್ವ ಶುದ್ಧಿ ರ್ವಿಯತೆ ॥

ಹೀಗೆ ವಿಶೇಷ ವೀರಶೈವರೇ ಷಡದ್ವಶೋಧನ ಪೂರ್ವಕವಾದ ಶಿವದೀಕ್ಷಾ ಸಂಸ್ಕಾರಕ್ಕೆ ಅರ್ಹರು. ಸಾಮಾನ್ಯ ವೀರಶೈವರಿಗೆ ಅಲ್ಲ. ಎಂಬೀಪ್ರಮಾಣ ದಿಂದ ವಿಶೇಷ ವೀರಶೈವರಿಗೆ ಷಡದ್ವಶೋಧನ ಪೂರ್ವಕ ಶಿವದೀಕ್ಷಾ ಸಂಸ್ಕಾರ ವೆಂತಲೂ ಸಾಮಾನ್ಯ ವೀರಶೈವರಿಗೆ ಅಧ್ವಶುದ್ಧಿಯಿಲ್ಲದ ಸಂಸ್ಕಾರವೆಂತಲೂ

ಹೇಳಲ್ಪಟ್ಟಿದೆ. ಆದಕಾರಣ ವಂಶಪರಂಪರವಾಗಿ ಗುರುಸ್ಥಲದ ಮಠದಯ್ಯನವರಿಗೆ ಷಡಧ್ವಶುದ್ಧಿ ದೀಕ್ಷೆ ನಡೆದು ಬಂದಿದೆ ಎಂದು ತಿಳಿಯಿರಿ.

**ಪ್ರಶ್ನೆ:** ಶರಣಸೇವಾ ಸಂಘಕ್ಕೆ ಮಣಿದು ಬಂದರೆ ದೀಕ್ಷೆಯನ್ನು ಮಾಡಿ ಶರಣ ಸಂಘಕ್ಕೆ ತೆಗೆದುಕೊಳ್ಳುವೆವೆಂದು ಬರೆದಿರುವಿರಿ.

**ಉತ್ತರ:** ಸನಾತನ ಧರ್ಮ ಬಿಟ್ಟು, ಅನಾಧಿಕಾರಿಗಳಾದ ಆಗಂತಕ ಶರಣ ಸೇವಾ ಸಂಘಕ್ಕೆ ಮಣಿದು ಬರುವದು ಎಷ್ಟೋ ದೂರೇ ಉಳಿಯಿತು. ಮಠಸ್ಥಾಸನಾಚಾರ್ಯರು ಮಾಡುವ ದೀಕ್ಷಾ ನಿಮಗೆ ಗೊತ್ತಿಲ್ಲವೆಂದ ಬಳಿಕ ನಿಮ್ಮ ಹೊಸ ದೀಕ್ಷೆ ಯಾವದು ? ನಿಮ್ಮ ಹೊಸ ಅಷ್ಟಾವರ್ಣಗಳಾವವು ? ತಿಳಿಸಿರಿ: ನಿಮ್ಮ ಹೊಸ ಅಯ್ಯನವರು ಬಸವೇಶ್ವರನ ಕಾಲಕ್ಕಿದ್ದ ಹಡಪದ ಹಂಪಯ್ಯ, ಮಡಿವಾಳ ಮಾಚಯ್ಯ, ಕುಂಬಾರ ಗುಂಡಯ್ಯ, ಮೇದಾರ ಕೇತಯ್ಯ, ಮಾದರ ಚನ್ನಯ್ಯ, ಹೊಲೆಯರ ಹರಳಯ್ಯ ಇವರ ವಂಶದವರೇ ? ನಿಮ್ಮ ಮನೆಯಲ್ಲಿ ಈಗ ಪಾದ ಪೂಜೆಗೆ ಅವರೇ ಬರಬಹುದು: ಅವರ ಪಾದ ತೀರ್ಥ ಪ್ರಸಾದ ಸ್ವೀಕರಿಸಿ, ನಿಮ್ಮ ಹೃದಯ ಇಷ್ಟೊಂದು ಪರಿಪಕ್ವ ಆಗಿ, ಇಂಥ ಉದಾತ್ತ ತತ್ವಗಳು ಹುಟ್ಟಿ, ವರ್ಣಸಂಕರ–ಜಾತಿಸಂಕರ ಮಾಡಲಿಕ್ಕೆ ಹತ್ತಿದ್ದೀರಲ್ಲವೇ ? ಶ್ರೀ ಷಡಕ್ಷರದೇವ ರಚಿಸಿದ " ರಾಜಶೇಖರ ವಿಲಾಸ "ದಲ್ಲಿ ಶೋಭಿಸಿದಂತೆ:

ಶ್ಲೋಕ: ಕೃತಕೃತಕೃತಿಯುಂ ; ಕ್ಷಿತಿಯೊಳ್ ಸುಕಿರಹಿತರೆಂತಳಿಯುಂ |
ಪಳೆಯೆಂ ಮುಳಿಯೆಂ ರತಿಲಾಲಸ ರಮಣಿ ಸಮರತಿಯುಂ
ಕ್ಲೀಬರ್ಕಳೆಂತು ಮೇಣ್ ಅರಿವವರೋ ||

ನಿಜವಾದ ವೀರಶೈವನು ಧರ್ಮದ ರಹಸ್ಯವನ್ನು ತಿಳಿದಂತೆ ಅಧರ್ಮಿಯು ತಿಳಿಯುವನೇ ? ನಿಮ್ಮ " ಶರಣ ಸಂಘ " ಭಕ್ತರ ಸಮೂಹ ಮಾತ್ರ. ದೀಕ್ಷೆ ಮಾಡುವ ಅಧಿಕಾರ ನಿಮ್ಮ ಸಂಘಕ್ಕೆ ಧರ್ಮಶಾಸ್ತ್ರದ ಪ್ರಕಾರ ಅಧಿಕಾರವೇ ಇಲ್ಲ. ಸನಾತನ ಗುರು ಜಂಗಮ ಸಂಘಕ್ಕೆ ಅದೆ.

**ಪ್ರಶ್ನೆ:** ಲಿಂಗಾಂಗಿಗಳು ಜನ್ಮತಃ ಸಮಾನರೆಂದು ಸಿದ್ಧವಾದ ಬಳಿಕ ಒಬ್ಬರನ್ನೊಬ್ಬರು ಶಿವರೂಪವೆಂದು ತಿಳಿದು ವಂದಿಸಬೇಕಲ್ಲದೆ, ಕಾಲುಚಾಚಿ ನಮಸ್ಕಾರ ಮಾಡಿಸಿಕೊಳ್ಳಕೂಡದು; ಇದು ಮಹಾ ಕಾಡ ಪದ್ಧತಿ ಎಂದು ಬರೆದಿರುವಿರಿ ?

**ಉತ್ತರ:** ಅಯ್ಯಾ ಪಾಪಿ ಜನ್ಮವೇ ? ನಿನ್ನಂತಹ ಕಲ್ಮಷ ಹೃದಯದವರನ್ನು ನಾಕಾಣೆ: ವೀರಶೈವ ಸಮಾಜದಲ್ಲಿ ನಿಮ್ಮಂಥವರನ್ನು ಕಂಡು ಹೀಗೆ ನುಡಿದಿದ್ದಾರೆ, ಶಿವಶರಣರು.

ವಚನ: ಕೋಗಿಲೆ ಸ್ವರಗೈಯುವದೆಂದು । ಕಾಗೆ ಅದಕ್ಕೆ ಎದುರಾಗಿ ಕುಳಿತು ಕರ್ರೆಂದು ಕಟಕಿಕೆಯನಾಡಿದರೆ ಆ ಕೋಗಿಲೆಗಾದ ಕೊರತೆಯೇನಯ್ಯಾ । ಸೂರ್ಯ ಪ್ರಕಾಶಕ್ಕೆ ಕಣ್ಣು ಕಾಣದ ಗೂಗೆ, ಕೆಟ್ಟ ನುಡಿನುಡಿದರೆ ಆ ಸೂರ್ಯನಿಗಾದ ಕೊರತೆ ಏನಯ್ಯಾ, ಕನ್ನಡಿಗೆ ಮೂಗಿಲ್ಲವೆಂದು ಮೂಕರು ಹಳಿದರೆ ಆ ಕನ್ನಡಿಗಾದ ಕೊರತೆ ಏನಯ್ಯಾ । ದ್ವೈತಾ, ದ್ವೈತವನೊಂಕಿ ಅಂಗಲಿಂಗದ ಹೊಲಬನರಿದು ಸ್ವಯಂ ಲಿಂಗವಾದ ಗುರುಗಳನ್ನು ಅಂಗ ವಿಕಾರದ ಮಂಗಮನುಜರು ಜರಿದು ಝೇಂಕರಿಸಿ ನುಡಿದರೆ ಅಂಗ ಲಿಂಗಾನುಭಾವಿಗೆಯಾದ ಕೊರತೆ ಏನಯ್ಯಾ । ಘನಲಿಂಗಿ ಮೋಹದ ಚನ್ನಮಲ್ಲಿಕಾರ್ಜುನ ॥ ೧ ॥

ವೀರಶೈವಾಮೃತ ಪುರಾಣ ಏಳನೇ ಖಂಡ ೧೧ನೇ ಸಂಧಿಯ ೧೫ನೇ ಪದ್ಯದಲ್ಲಿ:

ಪದ್ಯ: ಆಲಿಂಗಕಂ ಜಂಗಮಕ್ಕೆ ಗುರುದೇವರ್ಗೆ । ಬಾಲಕಾವಂದಿಸಲ್ಕೇಳು ದಯದೊಳು ನಮಿಸ । ಲಾಲಲಿತವೆನಿಸುವಗ್ನಿಷ್ಟೋಮ ಫಲವೈಯ್ದು ಮಧ್ಯಾಹ್ನದಲ್ಲಿ ನಮಿಸೇ ॥ ಈ ಲೋಕದೊಳಗಶ್ವಮೇಧ ಯಜ್ಞದ ಫಲವ । ಲಾಲೀಸೆನಿಪ್ಪ ಸಂಜೆಯೊಳೆರಗಲಾಗಿಯಾ । ಕೈಲಾಸದೊಳು ರುದ್ರನಾಗಿರ್ಪನೆನೆ ನಮಸ್ಕಾರವಧಿಕಕ್ಕೆ ಯಧಿಕಂ ॥ ೧೯ ॥

ಹೀಗೆ ನಮಸ್ಕಾರದ ಮಹತ್ವ ಹೇಳುತ್ತಿದ್ದು, ನಂಬೆಣ್ಣನು ಗಣನಿಕರಕ್ಕೆ ವಂದಿಸದೆ ಹಾಗೇ ಹೋದದ್ದಕ್ಕೆ ಮರೆಮಿಂಡ ಕೋಪಿಸಿ ಶಿವನಿಗೆ ಸಹ ಬಹಿಷ್ಕಾರ ಹಾಕಿದ ಕತೆ ಬಸವ ಪುರಾಣ, ವೀರಶೈವಾಮೃತ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ

ನೀವು ಮಾತ್ರ ನಾಸ್ತಿಕ ಮತದವರೆಂದೇ ಕಾಣುತ್ತೀರಿ. ಯಾಕಂದರೆ ಗುರು, ಜಂಗಮ, ಹಿರಿಯರಿಗೆ ನಮಸ್ಕಾರ ಮಾಡುವ ಪದ್ಧತಿ ನಿಮ್ಮ ಶರಣ ಸೇವಕ ಸಂಘದಲ್ಲಿರದದ್ದು ದೊಡ್ಡ ಬರದಲ್ಲಿ ಒತ್ತೀ ಬಿದ್ದು ಹೋದಂತೆ ಕಾಣುತ್ತವೆ. ಇಕೋ ನೋಡಿರಿ, ಶರಣರು ಹಾಡಿದ ವಚನ:

ವಚನ: ಗಣಂಗಳ ಬರವ ಕಂಡು ಕೈಮುಗಿದು ಅಂಜಲೇಬೇಕು. ಶರಣೆನ್ನ ಲೊಲ್ಲದೀ ಮನವು ಅಳ್ಕಿನೆಂದು ನಂಬಿ ನಂಬಲೊಲ್ಲದಾಗಿ ಮಹಾಲಿಂಗ ಚನ್ನರಾಮ ನೆನ್ನಕಡೆ ನೋಡಿ ನಗುತ್ತಲಿದ್ದಾನೆ ॥ ೧ ॥

ಈ ಪ್ರಕಾರ ಹಿಂದಿನವರು ಗುರುಮನೆತನದವರೆಂದು ತಮ್ಮ ಪಾಪ ಕ್ಷಾಲನ ಮಾಡಿಕೊಳ್ಳಲಿಕ್ಕೆ ಭಕ್ತಾದಿಗಳು ನಮಸ್ಕಾರ ಮಾಡುವ ಪದ್ಧತಿಯು ಎಲ್ಲ ಮತಸ್ಥರಲ್ಲಿಯೂ ಉಂಟು.

ಶ್ಲೋಕ: ಉತ್ತಮಂ ದೀರ್ಘದಂಡಂ ಚ । ಮಧ್ಯಮಂ ಶಿರ ದಂಡಂಚ । ಅಧಮಂ ಕರದಂಡಂಚ । ವಾಗ್ದಂಡಂ ಅಧಮಾಧಮ ॥ ೧ ॥

ಎಂಬಂತೆ ಗುರುನಮಸ್ಕಾರ ಮಾಡುವದು ಮೂರು ವಿಧವು. "ಮನೋ ನಮಸ್ಕಾರವೇ ಬೀಜ, ವಾಕ್ ನಮಸ್ಕಾರವೇ ಅಂಕುರ, ಕಾಯ ನಮಸ್ಕಾರವೇ ವೃಕ್ಷ. ಗುರುವಿನ ಪ್ರಸನ್ನತಿ ಫಲವೆನಿಸಿಕೊಂಡದ್ದರಿಂದ ಇಂಥ ಫಲಕ್ಕಾಗಿ ಭಕ್ತಾದಿಗಳು ನಮಸ್ಕಾರ ಮಾಡುತ್ತಾರೆ. ಇಂಥ ಗುರುಭಕ್ತಿ ನಮಸ್ಕಾರವಿಲ್ಲ ದವನ ಬಾಳು ಕಣ್ಣಿಲ್ಲದ ಮುಖದಂತೆಯೂ ಪ್ರಾಣವಿಲ್ಲದ ದೇಹದಂತೆಯೂ ಗಂಧವಿಲ್ಲದ ಹೂವಿನಂತೆಯೂ ಲವಣವಿಲ್ಲದ ಸಾರಿನಂತೆಯೂ ಆಜ್ಞಾಶಕ್ತಿ ಯಿಲ್ಲದ ದೊರೆತನದಂತೆಯೂ ನೀರಿಲ್ಲದ ಸರೋವರದಂತೆಯೂ ಪಾಂಡಿತ್ಯ ವಿಲ್ಲದ ಓದಿನಂತೆಯೂ ಅವಹೇಳನಾಸ್ಪದವಾಗುವದು. ಗುರುಸ್ಥಲದ ಮಹತ್ವ ತಿಳಿಯದೆ, ಅಲ್ಲದ-ಸಲ್ಲದ ಲೇಖಗಳನ್ನು ಬರೆದು " ಏನಕೇನ ಪ್ರಕಾ ರೇಣ ಪ್ರಸಿದ್ಧ ಪುರುಷೋಭವತಿ" ಎಂಬ ನಾಣ್ಣುಡಿಗನುಸಾರವಾಗಿ ವ್ಯರ್ಥ ಪ್ರಸಿದ್ಧ ಪುರುಷನಾಗಬೇಕೆಂದು ಹಂಬಲಿಸುತ್ತಿರುವ ನೀವು ದುರಾಲೋಚನೆ ಬಿಟ್ಟು ಸನಾತನ ಮಠದ ಧರ್ಮ ಗುರುಗಳಿಗೆ ಶರಣಾಗತರಾಗಿ ಮಣಿದು ಬಂದರೆ ನಾವು ನಿಮ್ಮನ್ನು ದೀಕ್ಷೆಮಾಡಿ ಸನಾತನ ಧರ್ಮಕ್ಕೆ ತೆಗೆದುಕೊಳ್ಳುತ್ತೇವೆ.

**ಪ್ರಶ್ನೆ:** ಅತಿವರ್ಣಾಶ್ರಮಿಗಳಾದ ವೀರಶೈವರಲ್ಲಿ ಜಾತಿ ಭೇದಗಳಿಲ್ಲ. ಇವರು ಗುರು ಪುತ್ರರಾಗಿದ್ದರಿಂದ ಗುರುವಿನ ಜಾತಿಯಾದ ಶಿವಜಾತಿಯಲ್ಲದೆ ಬೇರೆ ಜಾತಿಯಿಲ್ಲ. ಲಿಂಗಧಾರಣದಿಂದ ಲಿಂಗಮಯವಾದ ಶರೀರಕ್ಕೆ ಯಾವ ಜಾತಿಯನ್ನು ಹೇಳಬಹುದು? ಲಿಂಗಕ್ಕೆ ಜಾತಿಯನ್ನು ಹೇಳುವ ಪ್ರಮಾಣ ಗಳು ಸಿಗುವದಿಲ್ಲವೆಂದು ಬರೆದಿದ್ದೀರಿ.

**ಉತ್ತರ:** ಪಾಟೀಲರೇ? ವೀರಶೈವ ಮತದವರಿಗೆ ವರ್ಣಾಶ್ರಮ ಧರ್ಮಗಳಿಲ್ಲೆಂದು ಬರೆದದ್ದು ನೋಡಿ ನಿಮಗೆ ಸಂಪೂರ್ಣ ಮತತತ್ವಜ್ಞಾನವಿದ್ದಂತೆ ಕಾಣುವದಿಲ್ಲ. ವೀರಶೈವ ಮತದವರಿಗೆ ವರ್ಣಾಶ್ರಮ ಧರ್ಮಗಳು ಉಂಟೆಂಬ ವಿಷಯವನ್ನು ನೋಡಿರಿ.

ಶ್ಲೋಕ: ಸದ್ಯೋಜಾತೋದ್ಭವಾ ಬ್ರಾಹ್ಮಣಾಸ್ಸಂಚ ಧೂರ್ವ್ಯಾಃ| ವಾಮದೇವಾತ್ ಕ್ಷತ್ರಿಯಾಃ|
ಅಘೋರಾದ್ವೈಶ್ಯಾಃ| ತತ್ಪುರುಷಾಚ್ಛೂದ್ರಾಃ||
ನರಾಃ ಈಶಾನತಶ್ಶ್ಯಃ|| ಸಿದ್ಧಾಂತ ಶಿಖೋಪನಿಷತ್ತು

ಈ ಲೋಕದಲ್ಲಿರುವ ನಾಲ್ಕು ವರ್ಣಗಳಿಗೂ ನಾಲ್ಕು ಆಶ್ರಮಗಳಿಗೂ ಪಂಚಾಚಾರ್ಯರಿಂದ ಉದ್ಭವಿಸಿದ ಗುರುಸ್ಥಲ ಮಠಸ್ಥರೇ ಲಿಂಗಧಾರಿಗಳಲ್ಲಿ ಬ್ರಾಹ್ಮಣರೆಂದು ಶಾಸ್ತ್ರ ಹೇಳುತ್ತದೆ. ಪರಮೇಶ್ವರಾಗಮದಲ್ಲಿ:

ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ| ಲಿಂಗರುದ್ರಾಕ್ಷ ಭಸ್ಮಾಂಕಾ ಬ್ರಹ್ಮಕರ್ಮ ಸಮಾಶ್ರಿತಾಃ|| ಲಿಂಗಕ್ಕೆ ಜಾತಿಯಿಲ್ಲ. ಬೇಕಾದ ಜಾತಿಯವರು ಪೂಜಿಸಬಹುದು. ಮಾನವ ಕುಲಕ್ಕೆ ಜಾತಿ ಇದೆ. ಹಾಗು "ವರ್ಣಾಶ್ರಮ ಕ್ರಿಯಾನಿಷ್ಠೋ ಧರ್ಮವಿಚ್ಛಾಸ್ತ್ರ ಕೋವಿದಃ||" ಗುರುವಾದಾತನು ವರ್ಣಾಶ್ರಮ ಕ್ರಿಯಾನಿಷ್ಠನೇ ಇರಬೇಕೆಂದು ಘಂಟಾಘೋಷವಾಗಿ ಸಾರುತ್ತದೆ. ಚಂ. ಜ್ಞಾ. ಪದ್ಯ ೧೫ರಲ್ಲಿ: "ಅತೋವರ್ಣಾಶ್ರಮಾಚಾರೋ ನಿಗಮಾಗಮ ಬೋಧಿತಃ ಅವಶ್ಯಂಸಮನುಷ್ಠೇಯ ಯಸ್ಸತತಂ ಭಕ್ತಿತತ್ಪರೈಃ||" ಆದುದರಿಂದ ವರ್ಣಾಶ್ರಮಾಚಾರವು ನಿಗಮ ಆಗಮಗಳಲ್ಲಿ ಬೋಧಿತವಾದ ಮೂಲಕ, ವೀರಶೈವ ಧರ್ಮದವರಿಗೆ ವರ್ಣಾಶ್ರಮ ಧರ್ಮಗಳು ಉಂಟೆಂಬ ವಿಷಯವನ್ನು ಶಾಸ್ತ್ರಸಮ್ಮತವಾಗಿಯೂ ವೃದ್ಧಾಚಾರವಾಗಿಯೂ ಅನುಭವಸಿದ್ಧವಾಗಿಯೂ ಬರೆದಿದ್ದೇನೆ. ನೋಡಿರಿ; ವರ್ಣಾಶ್ರಮ ಧರ್ಮಗಳು ವೀರಶೈವಾನುಯಾಯಿಗಳಿಗೆ ಯಾವಾಗ ಉಂಟು? ಯಾವಾಗಯಿಲ್ಲ? ಎಂಬ ಪ್ರಶ್ನೆಗೆ ಉತ್ತರವನ್ನು ಮೊದಲು ತಿಳಿಯಿರಿ. 'ವೀರಶೈವ' 'ವೀರ ಶೈವ ಮತೀಯ' ಎಂಬ ಎರಡು ಶಬ್ದಗಳ ವಿಚಾರವಂ ಮಾಡಿದರೆ ವೀರಶೈವ ಶಬ್ದವು ಸಾಧ್ಯವೆಂಬುದಾಗಿಯೂ ವೀರಶೈವಮತೀಯ ಎಂಬ ಶಬ್ದವು ಸಾಧಕವೆಂಬುದಾಗಿಯೂ ತಿಳಿದುಬರುವದು. ಅದು ಹೇಗಂದರೆ, ಸೇನಾಧ್ಯಕ್ಷ ಸೈನಿಕನೆಂಬಂತೆಯೂ 'ರಾಜ' ರಾಜಕೀಯವೆಂಬಂತೆಯೂ ಭಾವಿಸಬೇಕಾಗಿರುವದು. ಸಾಧಕನಿಗೆ ಸಾಧನಗಳು ಪ್ರಯೋ-

ಜನಕಾರಿಗಳಾಗುವಂತೆ, ಸಾಧ್ಯನಿಗೆ ಸಾಧನಗಳು ಅಷ್ಟು ಅವಶ್ಯಗಳಲ್ಲವು. ಅದು ಹೇಗೆಂದರೆ: ವಿದ್ಯಾವಂತನಾಗಲು ಅಕ್ಷರಭ್ಯಾಸ ಮೊದಲು ಅವಶ್ಯವಿದ್ದಂತೆ, ವಿದ್ವಾಂಸನಾದ ಬಳಿಕ ಅಕ್ಷರಾಭ್ಯಾಸದಿಂದ ಪ್ರಯೋಜನವೇನು ? ಇದರಂತೆ ಒಂದನೆಯ ವೀರಶೈವ ಮತಸ್ಥ ಎರಡನೆಯ ವೀರಶೈವ ಮತೀಯರಿಗಾದರೂ "ಕಾರಣಾಗಮ"ದ ೧೦ನೇ ಪುಟದಲ್ಲಿ:

ಶ್ಲೋಕ: ವರ್ಣಾಶ್ರಮೋಯ ಧರ್ಮಾಢ್ಯಂ ಷಟ್‌ಸ್ಥಲಜ್ಞಾನಸಯುತಂ ।
ವಿಶಿಷ್ಟಮಷ್ಟಾವರಣೈಃ ಪಂಚಾಚಾರಾಭಿಮಂಡಿತಂ ॥ ೫೬ ॥
ಸದ್ಯಃಪಾಶಕ್ಷಯಕರಂ ಕರ್ಮಜ್ಞಾನ ಸಮುಚ್ಚಯಂ ॥

ಅಷ್ಟಾವರ್ಣ ವಿಶಿಷ್ಟವೂ ಪಂಚಾಚಾರ ಭೂಷಿತವೂ ಷಟ್‌ಸ್ಥಲ ಜ್ಞಾನ ಸಂಯುತವೂ ಕರ್ಮಜ್ಞಾನ ಸಮುಚ್ಚಯವೂ ಸದ್ಯಃ ಪಾಶಕ್ಷಯ ಕಾರಿಯೂ ಆದ ವೀರಶೈವವು ವರ್ಣಾಶ್ರಮ ಧರ್ಮದಿಂದ ಆಢ್ಯವಾಗಿರುತ್ತದೆ. ಹೀಗೆ ವರ್ಣಾಶ್ರಮ ಧರ್ಮಗಳು ಅವಶ್ಯಕಗಳಾಗಿರುವವು. ಒಂದನೇ ವೀರ ಶೈವನಿಗೆ ಮಾತ್ರ ಅಂದರೆ ವಿರಕ್ತನಿಗೆ ವರ್ಣಾಶ್ರಮ ಧರ್ಮಗಳು ಅಷ್ಟು ಪ್ರಾಮುಖ್ಯವಾಗಿ ತೋರುವದಿಲ್ಲ. ಏತಕ್ಕೆಂದರೆ ವೀರಶೈವ ಅನುಯಾಯಿಯು ವೀರಶೈವನಾಗಲಿಕ್ಕೆ ನೂರೊಂದು ಸ್ಥಲಗಳಲ್ಲಿ ಪೂರ್ವಾಶ್ರಯ ನಿರಸನ ಸ್ಥಲ ಅಂಗೀ ಕರಿಸುವ ಪರಿಯಂತರವೂ ವರ್ಣಾಶ್ರಮ ಧರ್ಮಗಳಿಂದ ಕೂಡಿ ಸಾಧಕನೆನಿಸಿ ಕೊಂಡಿರುವನು. ಆ ಸ್ಥಲವನ್ನು ಹೊಂದಿದ ಬಳಿಕ ವರ್ಣಾಶ್ರಮ ಧರ್ಮಗಳು ಮಿಥ್ಯವೆಂಬ ಅರಿವುದೋರಿ ಸಹಜ ಶಿವಧ್ಯಾನವು ತನ್ನಲ್ಲಿ ತಲೆದೋರಿದ ಬಳಿಕ ಸಾಧ್ಯನೆಂಬ ವೀರಶೈವನೆನ್ನಿಸಿಕೊಳ್ಳುವನು. ಇದರಂತೆ ನಿಗಮಾಗಮಗಳು, ಧರ್ಮಶಾಸ್ತ್ರ ಸಿದ್ಧಾಂತಗಳು ಇರುವವಲ್ಲದೆ, ವೀರಶೈವ ಮತದವರ ದೀಕ್ಷಾವಿಧಿ, ವಿವಾಹವಿಧಿಗಳಲ್ಲಿಯೂ ಪಂಚಾಚಾರ್ಯರಿಗೆ "ಆಚಾರ್ಯ" ಶಬ್ದ ಪ್ರಾಮುಖ್ಯತೆ ಯಿಂದ ವರ್ಣಾಶ್ರಮ ಧರ್ಮಗಳು ಸಾಧಕರೂಪವಾಗಿ ವಿಧಿಸಲ್ಪಟ್ಟಿರುವವು. ವೀರಶೈವ ಸಾಧ್ಯರೂಪು ನಿರಂಜನ ಜಂಗಮಕ್ಕೆ ವರ್ಣಾಶ್ರಮ ಧರ್ಮಗಳು ಹೇಳಿಲ್ಲ. "ಸಿದ್ಧಾಂತ ಶಿಖಾಮಣಿ"ಯಲ್ಲಿ:

ಶ್ಲೋಕ: ಅತಿವರ್ಣಾಶ್ರಮಿ ಸಾಕ್ಷಾದ್ಗುರುಣಾಂ ಗುರುರುಚ್ಯತೆ ।
ಯಸ್ಯ ವರ್ಣಾಶ್ರಮಾಚಾರೋಗಳಿತ ಸ್ವಾತ್ಮದರ್ಶನಾತ್ ॥
ಸೋತಿವರ್ಣಾಶ್ರಮೀ ಪ್ರೋಕ್ತಸ್ಸರ್ವ ವೇದಾಂತ ವಾದಿಭಿಃ ॥ ೧ ॥

ಈ ಪ್ರಕಾರ ಅತಿ ವರ್ಣಾಶ್ರಮಿಯು ಗುರುಗಳಿಗೆ ಗುರುವೆನಿಸುವನು. ಆತ್ಮಸಾಕ್ಷಾತ್ಕಾರದಿಂದ ವರ್ಣಾಶ್ರಮಗಳ ಆಚಾರವು ಯಾವನಿಗೆ ಅಳಿದು ಹೋಗುವದೋ ಅಂಥವ ವಿರಕ್ತ ಜಂಗಮ. ಆತನೇ ಅತಿವರ್ಣಾಶ್ರಮಿ ಎಂದು ವೇದಾಂತ ತಜ್ಞರು ಹೇಳುವರು.

ವೀರಶೈವರಲ್ಲಿ ವರ್ಣಾಶ್ರಮ ಧರ್ಮವಿಲ್ಲೆಂದು ಗ್ರಂಥ ಬರಹಗಾರರಾದ ಅ. ಮ. ಪಾಟೀಲರಿಂದ ವೀರಶೈವ ಮತಕ್ಕೆ ತೇಜಸ್ಸು ಕಡಿಮೆ ಆಗಹತ್ತಿದೆ. ಇವರ ಆಸ್ತಿಕ್ಯ ಬುದ್ಧಿ, ಭಕ್ತಿ ಇವುಗಳೊಡನೆ ಸ್ನಾನ, ಶಿವಾರ್ಚನೆ, ದೀಕ್ಷಾ ಸಂಸ್ಕಾರ, ಇವುಗಳ ಸುಧಾರಣೆ ಆಗದೆ ಅದರ ಮುಂದಿನ ಅತಿವರ್ಣಾಶ್ರಮದ ಷಟಸ್ಥಲಾಚರಣೆ ಲಿಂಗಾಂಗ ಸಾಮರಸ್ಯ ಇವುಗಳಿಗೆ ಹೋದದ್ದಾದರೆ "ಮಗಿಯನ್ನು ಮಾಡಲಿಕ್ಕೆ ಯೋಗ್ಯತೆಯಿಲ್ಲದ ಕುಂಬಾರನು ಹರವಿಯ ಸಂಚಗಾರ ಹಿಡಿದ" ನೆಂಬ ಗಾದಿಗೆ ಸಮಾನವಾಗುವದು. ಇದನ್ನು ತಿಳಿಯದೆ ಭ್ರಾಂತನಾಗಿ, ಲಿಂಗಧಾರಿಯಾದ ಮಾತ್ರಕ್ಕೆ ವೀರಶೈವನೆಂದು ತಿಳಿದು, ಅಜ್ಞಾನದಿಂದ ಮತಧರ್ಮಾಶ್ರಮಗಳು ಇವರಿಗೆ ಇಲ್ಲವೆಂದು ಭಾವಿಸಿ ಸಭೆಗಳಲ್ಲಿ ಹೇಳುವದು, ಅಲ್ಲದ-ಸಲ್ಲದ ಗ್ರಂಥಗಳನ್ನು ಬರೆದು ಪ್ರಕಟಿಸುವದು, ಇದು ಶುದ್ಧ ಅಸಂಬದ್ಧಾಲಾಪವೇ ಸರಿ. ಲಿಂಗಧಾರಿಯಾದ ಮಾತ್ರಕ್ಕೆ ವೀರಶೈವ ಷಟಸ್ಥಲ ಜ್ಞಾನಿ ಆಗಬಲ್ಲನೋ? ಅಕ್ಷರಾಭ್ಯಾಸಕ್ಕೆ ಆರಂಭಿಸಿದ ಮಾತ್ರಕ್ಕೆ ವಿದ್ವಾಂಸನೆನಿಸಿಕೊಳ್ಳುವನೋ? ಸೈನಿಕನೆಂದ ಮಾತ್ರಕ್ಕೆ ಅವನನ್ನು ಸೈನ್ಯಾಧ್ಯಕ್ಷನೆಂದು ತಿಳಿಯಬಹುದೋ? ರಾಜಕೀಯವನೆಂದ ಮಾತ್ರಕ್ಕೆ ಅವನು ರಾಜನಾಗಬಲ್ಲನೋ? ಇದರಂತೆ ಸಾಧಕ ಲಿಂಗಧಾರಿಗಳೆಲ್ಲರೂ ಸಾಧ್ಯ ವೀರಶೈವರೆಂದು ಎಂದಿಗೂ ಹೇಳಲಿಕ್ಕಾಗದು. ಮತ್ತು ಮತ ಧರ್ಮಾಶ್ರಮಗಳು ಇವರಿಗೆ ಇಲ್ಲವೆಂದು ಹೇಳುವ ಪಕ್ಷದಲ್ಲಿ ಲಿಂಗವಿಲ್ಲದವರನ್ನು ಭವಿಗಳೆಂದು ತಿಳಿದು ಅವರಲ್ಲಿ ಬಳಕೆ-ಭೋಜನಾದಿಗಳನ್ನು ಏಕೆ ಬಿಟ್ಟಿರುವಿರಿ? ಇದು ವರ್ಣಾಶ್ರಮ ಧರ್ಮವಲ್ಲವೇ?

ಶ್ಲೋಕ: "ಬ್ರಾಹ್ಮಣೋ ಭಗವಾನ್ರುದ್ರಃ ಕ್ಷತ್ರಿಯಃ ಪರಮೋಹರಿ।
ವೈಶ್ಯಃ ಕಮಲಗರ್ಭಶ್ಚ ಶೂದ್ರಸ್ಸ್ಯಾತ್ಪಾಕ ಶಾಸನಃ॥

ಎಂಬ ಪ್ರಮಾಣಾನುಸಾರವಾಗಿ ಶೇವಾನು ದೇವತೆಗಳಲ್ಲಿ ವರ್ಣಾಶ್ರಮ ಧರ್ಮ ಇರುವಾಗ ವೀರಶೈವರಲ್ಲಿ ವರ್ಣಾಶ್ರಮ ಧರ್ಮವಿಲ್ಲವೆಂಬ ಮಾತಿಗೆ ಸನಾತನ ಧರ್ಮ ಜ್ಞಾನಿಗಳೆಂದೂ ಒಪ್ಪರು.

ಶಿವಾಚಾರ, ಶಿವಭಕ್ತ, ಲಿಂಗಧಾರಿಯೆಂಬ ವೀರಶೈವ ಮತಾನುಯಾಯಿ ಶಬ್ದವನ್ನು ಪಡೆದು ಅದಕ್ಕೆ ವಿರುದ್ಧವಾಗವೆ ವರ್ತಿಸುತ್ತಿರುವದು ವರ್ಣ ಧರ್ಮ ವಲ್ಲವೆ ಮತ್ತೇನು ? ಲಿಂಗಧಾರಣ, ನಾಮಕರಣ, ಅನ್ನಪ್ರಾಶನ, ಚೌಲ, ಅಕ್ಷರಾಭ್ಯಾಸ, ದೀಕ್ಷಾ, ವಿವಾಹಾದಿಗಳು, ಬ್ರಹ್ಮಚಾರಿ, ಗೃಹಸ್ಥಾಶ್ರಮ, ಧರ್ಮಗಳಲ್ಲವೇ ? ಹೀಗೆ ಸಾಂಪ್ರದಾಯಕವಾಗಿ ಸರ್ವಕ್ಕೂ ಆಚರಿಸುತ್ತಿದ್ದು, " ಸ್ಕಂದ ಪುರಾಣದ ಶಂಕರ ಸಂಹಿತೆಯಲ್ಲಿ ":

ಶ್ಲೋಕ: ತಸ್ಮಾನ್ಮಾಹೇಶ್ವರೋ ವಿಪ್ರಃ ಶೃತಿ ಸ್ಮೃತ್ಯಾಗಮೋದಿತಂ ।
ವರ್ಣಾಶ್ರಮೋಚಿತಂ ಧರ್ಮಂ । ಪ್ರಾಣತ್ಯಾಗೇ ಪಿನತ್ಯಜೇತ್ ॥

ಆದುದರಿಂದ ಮಾಹೇಶ್ವರನಾದ ವಿಪ್ರನು ಶೃತಿ, ಸ್ಮೃತಿ, ಆಗಮುಗಳಲ್ಲಿ ಹೇಳಿದ ವರ್ಣಾಶ್ರಮೋಚಿತ ಧರ್ಮವನ್ನು ಪ್ರಾಣತ್ಯಾಗದಲ್ಲಿಯಾದರೂ ಬಿಡ ಬಾರದು ಎಂದು ಹೇಳುತ್ತಾನೆ. ಆದ್ದರಿಂದ ಲಿಂಗಧಾರಿಗಳಿಗೆ ವರ್ಣಾಶ್ರಮ ಧರ್ಮಗಳಿಲ್ಲವೆಂದರೆ ಯಾರೂ ನಿಮ್ಮ ಬರಹಕ್ಕೆ ಒಪ್ಪಲಾರರು. 'ಶಂಕರ ಸಂಹಿತಾ' ೮೬ನೆಯ ಅಧ್ಯಾಯದಲ್ಲಿ:

ಶ್ಲೋಕ: ಶಿವ್ರೋಕ್ತಾಂ ಜಾತಿಮರ್ಯಾದಾಂ ಯೋಽತೀತ್ಯ ಭುವಿವರ್ತತೇ ।
ಸಪಾಷಂಡ ಇತಿಜ್ಞೇಯಃ ಸರ್ವಕರ್ಮ ಬಹಿಷ್ಕೃತಃ ॥
ವರ್ಣಾಶ್ರಮ ಸದಾಚಾರಾಃ ಶಿವೇನ ಕಥಿತಾಃ ಪುರಾ ।
ಏತಾನುಲ್ಲಂಘ್ಯ ವರ್ತಂತೆ ಶಿವಸ್ಯಾಜ್ಞಾ ಪ್ರಲಾಪಿನಃ ।
ಭಿನತ್ತಿವೇದ ಮರ್ಯಾದಾಂ ಸ್ವಜಾತ್ಯಾಶ್ರಮ ಗೋಚರಾಂ ।
ತ್ಯಜಂತಿತೇಷಾಂ ಪಂಕ್ತೌ ಯೋಭುಂಗ್ತೇ ಪಾಪಿಷ್ಠ ಏವಸಃ ॥ ೧ ॥

ಲಿಂಗಧಾರಿಗಳಲ್ಲಿ ಗುರುಮನೆತನದವನೇ ಗುರುವಾಗಬೇಕು. ಅವ ನಲ್ಲೇ ತೀರ್ಥ ಪ್ರಸಾದಗಳನ್ನು ಸ್ವೀಕರಿಸಬೇಕು. ಅಗ್ರವರ್ಣದವರೇ ವೀರ ಶೈವ ದೀಕ್ಷೆಮಾಡಿಕೊಳ್ಳಬೇಕು. ಸಜಾತಿಯವರಲ್ಲೇ ವಿವಾಹ ಸಂಬಂಧವನ್ನು ಬೆಳೆಯಿಸಬೇಕು. ಮಾರ್ಗಾಚಾರವುಳ್ಳವರಲ್ಲೇ ಭೋಜನ, ಪ್ರತಿಭೋಜನ ಮಾಡಬೇಕು ಎಂಬ ಶಾಸ್ತ್ರಾನುಸಾರವಾದ ಕಟ್ಟಳೆಯು ಮತಹುಟ್ಟಿದಾಗಿ ನಿಂದಲೂ ನಡವಳಿಕೆಯಲ್ಲಿ ಬಂದಿದೆ. ಇದು ತಪ್ಪಿ, ಈ ಕಲಿಕಾಲದಲ್ಲಿ ಶ್ರದ್ಧೆಯು ನಾಶವಾಗಿ ಸ್ವಾರ್ಥ ಹೆಚ್ಚಿರುವವರಿಂದ ಭಕ್ತಾದಿಗಳು ಧರ್ಮದಿಂದ ಚ್ಯುತಿ

ಹೋಂಪಲಿಕ್ಕೆ ತಡವಾಗಲಾರದು. ಮತ್ತು ಅಹಂಭಾವದ ಪ್ರಾಬಲ್ಯವಾಗಿ ಶ್ರೇಷ್ಠ, ಕನಿಷ್ಠ ಭಾವಗಳು ಅಳಿದು ಹೋಗಿದ್ದರಿಂದ ವೀರಶೈವ ಚಾತುರ್ವರ್ಣ ಗಳ ಪವಿತ್ರವಾದ ಪರಸ್ಪರ ಸಹಕಾರತೆಯು ನಷ್ಟವಾಗಿ ಪರಸ್ಪರರು ಸ್ವತಂತ್ರ ರಾಗಿರುವರು. ಸಾಮಾನ್ಯವಾಗಿ ಕಲಿಯುಗದಲ್ಲಿ ವೀರಶೈವರಲ್ಲಿ ಏನಾಗುವ ದೆಂಬುವದನ್ನು ಕಾಲಜ್ಞಾನ ಪುರುಷರಾದ ಬಸವಾದಿ ಪ್ರಮಥರು ಹಾಡಿದ್ದನ್ನು ಇಲ್ಲಿ ಕೊಟ್ಟಿರುವದು ನೋಡಿರಿ ?

ವಚನ: ಹರಗುರು ಮೂರ್ತಿಗಳ ಚರಣಕ್ಕೆರಗದೇ ತಮ್ಮ । ಪರಬಂಧು ಬಳಗಕ್ಕೆ ಶರಣು ಮಾಡುವರು ॥ ಗುರುಲಿಂಗ ಜಂಗಮರ ತೀರ್ಥಪ್ರಸಾದವನು । ಗುರುವರ್ಗದಲ್ಲಿ ಬಿಟ್ಟು ಹೋಗುವರೇ ಯಮಪುರವ । ಜಂಗಮವೇ ತಮ್ಮಿಷ್ಟಲಿಂಗ ವೆಂದರಿಯದೇ । ಮಂಗ ಮೂರ್ಖರಿಗೆಲ್ಲಿ ಆರಾಧ್ಯ ಸ್ಥಲವು । ಭಕ್ತಿ ಭಾವವ ಬಿಟ್ಟು ಯುಕ್ತಿ ವಚನವ ಕಲಿತು । ವ್ಯರ್ಥ ಘಟ ಹೊರಕರಿಗೆಲ್ಲಿ ಆರಾಧ್ಯಸ್ಥಲವು ॥ ಮೂಲಕರ್ತರ ಬಿಟ್ಟು ತಾವೇ ಘನಗುರುವೆಂದು । ಬಾಳುವ ಮನುಜರಿಗೆಲ್ಲಿ ಆರಾಧ್ಯಸ್ಥಲವು ॥

**ನಂಜೇಶನ ಕಾಲಜ್ಞಾನ:**

ಪರಮಪಾಪಿಗಳೆಲ್ಲ ಗುರುಗಳೆನಿಸುವರಯ್ಯ ।
ಪರರ ನಿಂದಿಸುತ ಬರುವಾಗ ಜನರೆಲ್ಲ । ಮರುಳಾಗುವರು ನಂಜೇಶ ॥
ಗುರುಗಳಾಜ್ಞೆಯನು ಶಿಷ್ಯರು ಜರಿದು ನುಡಿಯುವರಯ್ಯ ।
ಬರೆಬರೆದು ಓದುಗಲಿಯುತ್ತ ನರರೆಲ್ಲ । ಹಿರಿಯರಾಗುವರು ನಂಜೇಶ ॥

**ಕರಸ್ಥಲ ನಾಗಲಿಂಗನ ಕಾಲಜ್ಞಾನ:**

ಓದುವ ಶಾಸ್ತ್ರಕ್ಕೆ ಮಾದಿಗ ಬರುತ್ತಾನೆ ದಿಮ್ಮಿಸಾಲೆ । ಮುಂದೆ ಆದಿ ಗಣಂಗಳ ಪಾದವೆ ಗತಿಯೆನ್ನಿ ದಿಮ್ಮಿಸಾಲೆ । ಕ್ಷಾತ್ರಿಯ ಜನರೆಲ್ಲ ಒಂದು ಗೋತ್ರಗಳಾದಾರು ದಿಮ್ಮಿಸಾಲೆ । ವೇದ ಶಾಸ್ತ್ರವನೋದುವ ರೀತಿಯ ನರಿ ಯಾರು ದಿಮ್ಮಿಸಾಲೆ ॥

ನಿಜಗುಣಿಯ ವಿವೇಕ ಚಿಂತಾಮಣಿಯ ಯುಗಭೇದ ಕರ್ಮ ಸಿದ್ಧಿ ಭೇದ ದಲ್ಲಿ ಕಲಿಯುಗದಲ್ಲಿ ಮುಂದೆ:

ಶ್ಲೋಕ: ಪಾಪಾಧಿಕ್ಯದಿಂ ಕೇವಲ ನಾಸ್ತಿಕ್ಯಮುಂ । ಅನ್ಯಥಾ ಜ್ಞಾನಮುಂ ।
ಮಹಾಲೌಕಿಕ ಶಿಲ್ಪಿಚಾತುರ್ಯಮುಂ । ವಂಚನಾದಿ ಕುಯುಕ್ತಿಗಳಿಂ ।
ಲೋಕದೃಷ್ಟಾಂತದಿಂ ವೇದದೂಷಣಮುಂ । ನೀಚ ಪ್ರಾಬಲ್ಯಮುಂ ।
ಸ್ವೇಚ್ಛಾನ್ಯಾಯಮುಂ । ಶಿವಧರ್ಮಕ್ಷಯಮುಂ ।
ದೈವಶಕ್ತಿತಿರೋಭಾವಮುಂ । ಅಕೃತ್ಯಂಗಳಿಂ ।
ವರ್ಣಸಾಂಕರ್ಯಮುಂ । ಪ್ರಜೂರಮಾಗಿ ಜನರೆಲ್ಲರು ।
ಶಿಸ್ನೋದರ ಪಾರಾಯಣರಪ್ಪುವದರಿಂದ

ಎಂಬುದಾಗಿ ಬರೆದಿಟ್ಟಿರುವರು. ಈ ಗುಟ್ಟನ್ನರಿಯದೇ ವರ್ಣಾಶ್ರಮ ಧರ್ಮಗಳನ್ನು ಹಳಿಯುತ್ತ ಪ್ರವೃತ್ತಿ, ನಿವೃತ್ತಿ ಧರ್ಮಗಳನ್ನು ಅರಿಯದೆ ಇಂಥ ಅಸುರ ಸ್ವಭಾವದವರಿಗೆ ದೇವರೂ ಕೂಡ ಸತ್ತಿರುತ್ತಾನೆ. "ಅಸನ್ನೇವ ಸಭವತಿ, ಅಸದ್ಬ್ರಹ್ಮೇತಿ ವೇದಚೇತ್" ಇಂಥ ನಾಸ್ತಿಕರಾದ ಅಸುರರಿಗೆ ಅಧೋಗತಿಯೇ ಸರಿ.

ಕಲಿಯುಗದಲ್ಲಿ ಗುರುಸ್ಥಲದವರು, ಹಾಗೂ ಭಕ್ತಾದಿಗಳು ತಮ್ಮ ಕರ್ತವ್ಯವನ್ನು ಮರೆತು ಸ್ವಾರ್ಥಪರಾಯಣತೆಯಿಂದ ತಾವು ತೇಜೋಹೀನ ರಾಗಿರುವರು. ಕಲಿಯುಗದಲ್ಲಿ ಲಿಂಗಾಂಗಿ, ಕ್ಷತ್ರಿಯ, ವೈಶ್ಯ ವರ್ಣಗಳು ನಷ್ಟ ವಾಗಿ ವೀರಶೈವ ಲಿಂಗಾಂಗಿ ಭಕ್ತರು ವಿವೇಕವಿಲ್ಲದೆ ಎಲ್ಲರ ಮೇಲೆ ಅಧಿಕಾರ ನಡಿಸಹೋಗುವರು. ಎಲ್ಲರಲ್ಲಿಯೂ ಶ್ರೇಷ್ಠತ್ವದ ಭಾವವು ಸುಳಿದಾಡಹತ್ತುವದು. ವೀರಶೈವ ಸಮಾಜದಲ್ಲಿ ಪಂಚಮಸಾಲಿ, ಬಣಜಿಗ, ಆದಿಬಣಜಿಗ, ಗಾಣಿಗ, ಕುಂಬಾರ, ಕ್ಷೌರಿಕ, ಸಾದರು, ನೊಣಬರು, ಕುಡುಒಕ್ಕಲಿಗರು ಇನ್ನೂ ಎಷ್ಟೋ ಅವಾಂತರ ಕುಲಗಳಿವೆ. ಇವರಿಗೆಲ್ಲ ವೀರಶೈವ ಮತಸ್ಥಾಪನಾ ಚಾರ್ಯ ವಂಶದ ಮಠಸ್ಥ ಸಂಸಾರಿ ಜಂಗಮರೇ ಗುರುಗಳಾಗುತ್ತ ಬಂದಿದ್ದಾರೆ. ಈ ಮಠಸ್ಥ ಅಯ್ಯನವರೇ ಸದರೀ ಭಕ್ತರ ಮನೆಯಲ್ಲಿ ವೀರಶೈವ ದಶಕರ್ಮ ಪದ್ಧತಿ ಪ್ರಕಾರ ಕಾರ್ಯ ಮಾಡಿಸುತ್ತ ಬಂದಿದ್ದಾರೆ. ಇವರಿಗೆ ಬೇರೆ ಉದ್ಯೋ ಗಕ್ಕೆ ವೇಳೆ ಸಿಗದ್ದರಿಂದ, "ಶಿವಾಗಮದಲ್ಲಿ":

ಶ್ಲೋಕ: ದಂಡ ಜೋಳಿಗಿಪ್ಪರ್ಯೋರ್ಜಸ್ತಂ ಜಂಗಮಂ ಭಕ್ತಮಂದಿರಂ ।
ಅತಿಭಕ್ತಿಲಿಂಗ ಸಂತುಷ್ಟಮುಪ ಹಾಸ್ಯಮೇವ ದಂಡನಂ ।
ಜಂಗಮಂ ಜಂಗಮುಶ್ಚೈವ ಜಂಗಮುನ್ಯಾರಣೋದ್ಭವಂ

ಎಂಬ ಪ್ರಮಾಣದಂತೆ ಹಾಗೂ "ಭೂಮಿಸ್ತ್ರೀ ಜಂಗಮಸ್ಥಿತಾಃ" ಎಂಬ ಶಿವಾಗಮ ವಾಕ್ಯ ಪ್ರಮಾಣದಂತೆಯೂ, ಪರೋಪಕಾರಿಯಾದ ಗುರುಸ್ಥಲ ಜಂಗಮರು ಭಕ್ತರಲ್ಲಿ ಬಂದಲ್ಲಿ ಎಲ್ಲರಂತೆ ಇವರು ಯಾಚಕರೆಂದು ತಿಳಿಯದೆ ಪರೋಪಕಾರಕ್ಕಾಗಿ ಶಿವನ ಸನ್ಮಾತ್ರವನೇ ಗುರುವಾಗಿ, ಚಿನ್ಮಾತ್ರವನೇ ಲಿಂಗವಾಗಿ, ಆನಂದ ಸ್ವರೂಪವನೇ ಜಂಗಮವೇಕಸ್ವರೂಪವಾದ ಪರಶಿವ ಮೂರ್ತಿಯೇ ನಿಜಸ್ವರೂಪವೆಂದು ಭಾವಿಸಿ ಭಯ, ಭಕ್ತಿ, ಕಿಂಕರ ವಾಣಿಯಿಂದ ಒಡೆಯರಿಗೆ ನಾವು ಒಡವೆಯನ್ನು ಒಪ್ಪಿಸುವೆನೆಂದು ತನುಮನದಲ್ಲಿ ವಂಚನೆಯಿಲ್ಲದೆ ಅನ್ನ, ವಸ್ತ್ರ, ಸ್ಥಾನ, ಸನ್ಮಾನಗಳಿಂದ ಗುರು ಸೇವೆಯನ್ನು ಮನದಲ್ಲಿ ಲಿಂಗ ಸಂಬಂಧ ಮಾಡಿಕೊಂಡು ಪರಮಾನ್ನ ಪಾಯಸಗಳಿಂದ ಸಂತೃಪ್ತಿಯನ್ನು ಮಾಡಿ ಪರಮಾನಂದ ಪ್ರಸಾದವಂ ಪಡೆದನುಭವಿಸುತ್ತಿರುವ ನಿರ್ವಂಚಕನಾದ ಸದ್ಭಕ್ತನ ಸುಕೃತವಂ ಗಣನೆಗೆ ತಂದು ಬರೆಯಬೇಕಾದರೆ ಬ್ರಹ್ಮನನ್ನು ಆಯುಷ್ಯ ಸಾಲದು. ಈ ಪ್ರಕಾರ ತಮ್ಮ ಪ್ರಪಂಚದ ಭಾರ, ಭಕ್ತಾದಿಗಳ ಮೇಲೆ ಹಾಕಿ ತಮ್ಮ ದೀಕ್ಷಾ ಕಾಲದಲ್ಲಿ, ಗುರುಗಳು ದಯಪಾಲಿಸಿದ ದಂಡಕೋಲು, ಜೋಳಿಗೆಯನ್ನು ತೆಗೆದುಕೊಂಡು "ಶಿವಾಶಿಷ್ಟ, ಮಹಾಧರ್ಮ ಗುರುಕೋರ್ಥಾಸ್ತ ಭಿಕ್ಷಾಂಭಿಕ್ಷ" ಎಂದು ಭಿಕ್ಷೆ ಬೇಡಿ ಉಪಜೀವಿಸುತ್ತ ಬಂದರು. ಇನ್ನುಮೇಲೆ ಗುರುಸ್ಥಲದ ಅಧ್ಯಯನವು ಮಾಡುವ ಈ ಕಾರ್ಯವನ್ನು ನೀವು ಮಾಡಲೆಂದು ಜೋಳಿಗೆ ಹಾಗು ದಂಡಕೋಲನ್ನು ಆಶೀರ್ವದಿಸಿದ್ದೇವೆ. ಸ್ವೀಕರಿಸಿರಿ.

**ಪ್ರಶ್ನೆ:** ಭಕ್ತರನ್ನು ಧರ್ಮ ಪೀಠಗಳಿಂದ ದೂರಿರಿಸುವ ಬಹುದಿವಸಗಳ ಸುಸಂಘಟಿತ ಪ್ರಯತ್ನಗಳ ಫಲವೇ ಇಂತಹ ಗ್ರಂಥಕರ್ತರನ್ನು ಅತಾತ್ವಿಕವಾಗಿ ಹೀಗೆ ಬರೆಯಲು ಪ್ರಚೋದಿಸಿದೆ. ಇದರ ದುರ್ಲಾಭವನ್ನು ಹೊಂದವರು ತಾವು ಭಕ್ತರಲ್ಲವೆಂಬ ಕುವಿಚಾರಕ್ಕೆ ಒಳಪಟ್ಟಿದ್ದಾರೆ.

**ಉತ್ತರ:** ನಿಮ್ಮ ಬರಹದ ದಾರೀ ತಪ್ಪಿ ಅಡವೀ ಬಿದ್ದಂತಾಗಿದೆ. ವೀರಶೈವ ಮತವು ಪಂಚಾಚಾರ್ಯರಿಂದ ಸ್ಥಾಪಿಸಲ್ಪಟ್ಟಿದ್ದನ್ನು ಶ್ರೀ ಬಸವೇಶ್ವರನು ಈ ಮತವನ್ನು ಸ್ವೀಕರಿಸಿ ಸನಾತನ ಗುರು, ಲಿಂಗ, ಜಂಗಮರಲ್ಲಿ ಭಕ್ತಿಯನಿಟ್ಟು ಸೇವೆಗೈದು ಮಹಾ ಭಕ್ತನಾಗಿ ಮೆರೆದನಲ್ಲದೆ, ನಿಮ್ಮಂತೆ ಗುರುಸ್ಥಲ, ಜಂಗಮ ಸ್ಥಲಕ್ಕೆ ಆಶೆಮಾಡಿ ಯಾವ ವಚನಗಳನ್ನೂ ಹಾಡಿಲ್ಲ.

ಧರ್ಮ ಪೀಠಗಳಿಗೆ ಆರಿಸಬೇಕಾದರೆ ಯಾರುಬೇಕಾದವರನ್ನು ಆರಿಸಬೇಕೆಂದು ಶಾಸ್ತ್ರಗಳು ಹೇಳಿಲ್ಲ. "ವೀರಶೈವಾಚಾರ ಕೌಸ್ತುಭ"ದಲ್ಲಿ ಎಂಥವರನ್ನು ಆರಿಸಬೇಕೆಂಬುದನ್ನು ಹೇಳಿರುವುದು ನೋಡಿರಿ.

ಶ್ಲೋಕ: ಕುಲೀನಂ ಸತ್ಯಸಂಧಾನಂ ಸರ್ವಲಕ್ಷಣ ಸಂಯುತಂ
ಶಿವಸಿದ್ಧಾಂತ ತಂತ್ರಜ್ಞಂ ಗುರುಕ್ರಮಸಮನ್ವಿತಂ।
ಲಕ್ಷಣೈಸ್ತಂ ಪರೀಕ್ಷೇತ್ ಬಹುಶಾಸ್ತ್ರಕೋವಿದಃ॥

ಆ ಪರಿ ಗುರುಸ್ಥಾನವನ್ನು ಪಡೆಯುವವನು ಸತ್ಕುಲ ಪ್ರಸೂತನಾಗಿಯೂ ಸತ್ಯ ಶೀಲನಾಗಿಯೂ ಅಂಗವೈಕಲ್ಯಾದಿ ದೋಷವಿಲ್ಲದವನಾಗಿಯೂ ಅಯ್ಯಾಚಾರದ ಮನೆತನದವನಾಗಿಯೂ ಇದ್ದಾನೆಯೋ? ಇಲ್ಲವೋ? ಎಂಬುದನ್ನು ಶಾಸ್ತ್ರಜ್ಞರಾದ ಜನಗಳು ಚನ್ನಾಗಿ ಪರೀಕ್ಷಿಸಿ, ಅಂತಹ ಯೋಗ್ಯರಿಗೆ ಮಠಾಧಿಕಾರ ಕೊಡಬೇಕೆಂದು ಹೇಳಲ್ಪಟ್ಟಿರುವದು.

ಶ್ಲೋಕ: ಮಠಸ್ಥಲ ಸಮುತ್ಪನ್ನಶ್ಶಾಂತ ಶೈವಾಗಮಾರ್ಥವಿತ್।
ಅನುಚಾನಃ ಪ್ರಸನ್ನಾತ್ಮಾ ಶಿವದೀಕ್ಷಾಭಿಷೇಚಿತಃ।
ಶಿವಾಗಮೋಕ್ತಮತಿಮಾಂಶ್ಚ ಜಪ ಪೂಜಾಪರಾಯಣಃ।
ರುದ್ರಾಕ್ಷಿ ಮಾಲಾಂಪಿ ಭ್ರಾಜಿಷ್ಣು ಪುಂಡ್ರಾಂಕಿತ ಮಸ್ತಕಃ।
ವಿಶುದ್ಧ ದೇಹಃ ಕುಲಜಶ್ಶಿವಾಚಾರ ಸಮನ್ವಿತಃ

ಅಂದರೆ ಮಠಾಧಿಕಾರಿಗಳಾಗತಕ್ಕವರು ಮಠಾಧಿಕಾರಿಗಳ ವಂಶಜರಾಗಿಯೂ ವಿದ್ಯಾ, ನೀತಿ, ಸೌಜನ್ಯ, ಶಮ-ದಮಾದಿ ಗುಣಸಂಪತ್ತಿ, ಸತ್ಕುಲಪ್ರಸೂತಿ ಮೊದಲಾದ ಸದ್ಗುಣಗಳುಳ್ಳವರಾಗಿ ಇರಬೇಕೆಂದು ಹೇಳಲ್ಪಟ್ಟಿರುವದು. ಆ ಪ್ರಕಾರ, ಗುರುಸ್ಥಲದ ಮಠಗಳಿಗೆ ಅಧಿಕಾರಿಗಳಾಗುತ್ತ ಬಂದಿದ್ದಾರೆ. ಅಂಥವರೇ ಭಕ್ತಾದಿಗಳ ಮನೆಗಳಲ್ಲಿ ಬಿನ್ನಹ ತೀರಿಸುತ್ತ ಬಂದಿದ್ದಾರೆ. ಆ ಭಕ್ತಾದಿಗಳು "ಶಿವಾಗಮದಲ್ಲಿ" "ವಸ್ತ್ರಭೂಷಣ ಗಂಧಾದ್ಯೈರ್ಧೂಪಂ। ದೀಪಂಚ ತಾಂಬೂಲಂ ಜಂಗಮೇನ ವಿನಾಭುಂಕ್ತೇ ಪ್ರಸಾದಂ ನಿಷ್ಫಲಂ ಭವೇತ್" ಎಂಬಂತೆ ವಸ್ತ್ರಕಪ್ಪಡವ ತೊಡೆಯುವಲ್ಲಿಯೂ ಭಂಗಾರವ ತೊಡುವಲ್ಲಿಯೂ ಗಂಧಾನುಲೇಪನದಲ್ಲಿಯೂ ಧೂಪವಾಸನೆಕೊಂಬುವಲ್ಲಿಯೂ ದೀಪವನೆತ್ತಿಕೊಂಬುವಲ್ಲಿಯೂ ವೀಳ್ಯವ ಮಾಡುವಲ್ಲಿಯೂ ಇಂತೀ ವಸ್ತುಗಳನ್ನು ಜಂಗಮ ಲಿಂಗಕ್ಕೆ ಸಮರ್ಪಿಸದೆ ಭಕ್ತನು ಸಮರ್ಪಿಸಿ ಕೊಂಡಾಡೆ ಆ ಪ್ರಸಾದ ನಿಷ್ಫಲ. ಹೀಗೆ ಹೇಳಿದ್ದರಿಂದ:

ಈ ಅನುವಂಶ ಗಣಂಗಳಿಗೆ ವ್ಯಷ್ಟಾನ್ನವನ್ನು ಮಾಡಿ ಉಣಿಸುವದನ್ನು ಕಂಡು ಊಟಕ್ಕೆ ಆಶೆಪಟ್ಟು ಅ ಮ. ಪಾಟೀಲರು ಗುರುಸ್ಥಲದ ಮಠದಯ್ಯನವರನ್ನು ಬದಿಗೊತ್ತಿ ಅವರ ಸ್ಥಲಕ್ಕೆ ತಾನು ಬರಬೇಕೆಂದು ಅತ್ಯಾಸೆಯಿಂದ ಅಯ್ಯನವರದೇನು ಶ್ರೇಷ್ಠತ್ವ? ಅವರ ಗುರುತ್ವವನ್ನು ನಾವೇಕೆ ಮನ್ನಿಸಬೇಕೆಂದು ದುರಾಲೋಚನೆಯಿಂದ ನಮ್ಮಲ್ಲಿಯೇ ನಾವು ಗುರುಗಳನ್ನು ಮಾಡಿಕೊಂಡರಾಯಿತೆನ್ನುವರು. ಆದರೆ ಹಳೇ ಅಯ್ಯನವರೇ ಭಿಕ್ಷೆ ಬೇಡಿ ತಿನ್ನುವ ಹೊತ್ತಿನಲ್ಲಿ ಹೊಸ ಅಯ್ಯನವರು ಬಂದು ಏನು ತಿನ್ನಬೇಕೋ ದೇವರೇ ಬಲ್ಲ. ವೀರಶೈವ ವರ್ಣಾಶ್ರಮದ ಗುರುಸ್ಥಲದ ಮಠದಯ್ಯನವರು ಭಕ್ತ ಬಾಂಧವರೆಂದು ತಿಳಿದು ನಿಮ್ಮಂತೆ ಬಂಧು-ದ್ರೋಹಕ್ಕೆ ಸರ್ವಥಾ ಮುಂದುವರಿಯಲಾರರು. ಪ್ರಿಯಬಂಧು ಅ. ಮ. ಪಾಟೀಲರೇ, ವಿಚಾರಮಾಡಿ ನೋಡಿರಿ? ಪವಿತ್ರವಾದ ಬಸವಾದಿ ಪ್ರಮಥರು ವಂಶ ಪರಂಪರವಾಗಿ ಅನುಸರಿಸಿ ನಡೆದುಕೊಂಡು ಬಂದ ಗುರುಸ್ಥಲದ ಹಕ್ಕುಬಾಧ್ಯತೆಗಳನ್ನು ನೀವು ಅನ್ಯಾಯದಿಂದ ಅಪಹರಿಸಲು ಮಹಾತ್ಮರಾದ ಶಿವ-ಶರಣರು ನಿಮ್ಮ ಮಾತಿಗೆ ಒಪ್ಪಿಕೊಳ್ಳುತ್ತಿರಬಹುದೇ? ವೀರಶೈವ ಗುರುಸ್ಥಲದ ಅಯ್ಯನವರು ಅನುವಂಶದಿಂದ ಬಂದ ಭಕ್ತಾದಿಗಳಲ್ಲಿ ದಶಕರ್ಮ ಪದ್ಧತಿ ಪ್ರಕಾರ ಹವ್ಯಕವ್ಯಾದಿಗಳನ್ನು ಮಾಡಿಸಿ, ಪಾದತೀರ್ಥ ಪ್ರಸಾದಗಳನ್ನು ಕೊಡುವ ಹಕ್ಕಿನ ಸ್ವಾತಂತ್ರ್ಯಹರಣ ರೂಪ ಮಹಾಪಾತಕವನ್ನು ಜ್ಞಾನಿಗಳಾದ ಬಸವಾದಿ ಪ್ರಮಥರು ನಿಮ್ಮ ಮಾತಿಗೆ ಸಮ್ಮತಿಸುತ್ತಿರಬಹುದೇ?

ಇಂತಹ ಹಲವು ಬಗೆಯ ಅನ್ಯಾಯಗಳ ನೀಚಸ್ವಾರ್ಥದ ಬಲೆಗೆ ಬಿದ್ದಿರುವ ಅಹಂಭಾವದ ನಿಮ್ಮಂತಹ ಕುಲನಾಶಕರಿಂದ ವೀರಶೈವ ಮಠಾಧಿಪತಿಗಳಿ, ಸಂಸಾರಿ ಜಂಗಮರ ಸಮಾಜಕ್ಕೆ ನಿಮ್ಮಿಂದ ಘಟಿಸುತ್ತಿರುವ ಅನ್ಯಾಯವನ್ನು ತಡೆಯುವದಕ್ಕಾಗಿಯೂ ನಿಮ್ಮನ್ನು ಹಾದಿಗೆ ತಂದು ನಮ್ಮ ಮಠಗಳ ಹಕ್ಕನ್ನು ಕಾಯ್ದುಕೊಳ್ಳಲಿಕ್ಕೆ "ಶಠಸ್ಯಶಾಠ್ಯಂ" ಎಂಬ ಸಿದ್ಧಾಂತದಂತೆ, ನಿಮ್ಮಂತೆ ನಾವು "ಮಂತ್ರವಾದಿಗೆ ಮದ್ದು" ಎಂಬ ಗ್ರಂಥವನ್ನು ಬರೆದು ಹೆಣಗುವದು ಅನ್ಯಾಯವಾಗಬಹುದೇ? "ಮಂತ್ರವಾದಿಗೆ ಮದ್ದು" ಎಂಬ ಗ್ರಂಥವು ವೀರಶೈವರ ಸರ್ವೋತ್ತಮತ್ವಕ್ಕೆ ಸಾಧನವಾದ ಅಪಾಕೃತ ವರ್ಣಾಶ್ರಮ ಧರ್ಮವನ್ನು ತಲ್ಲಗಳೆಯಲುಜ್ಜುಗಿಸುವ ಅಜ್ಞರಾದ ಗದಗಿನ ಶರಣ ಸಂಘದ ವಾದಿಗಳ

ನಾಲಿಗೆಯನ್ನೆತ್ತದಂತೆ ಅವರ ಬಾಯಿಗೆ ಬೀಗವನ್ನು ಜಡಿಮ, ಅವರಿಗೆ ಇದು ಪರಮ ತಾತ್ವಿಕವೆಂದು ನಿರ್ಣಯಿಸಲು ಶಿವಶಾಸ್ತ್ರವೇ ಮುಖವೆಂದು ತಮ್ಮ ಅಂತರಂಗಿಕ ನಿರ್ಧಾರವನ್ನಿಟ್ಟುಕೊಂಡೇ ನಿರ್ವಿವಾದ ಪದ ಪ್ರಯೋಗದಿಂದ ಶ್ರೀಮನ್ ಮರಿ ತೋಂಟದಾರ್ಯರು ವೀರಶೈವ ಬ್ರಾಹ್ಮಣ ಮೊದಲಾದವರ "ಸರ್ವೋತ್ತಮತ್ವವನ್ನು" ಸಿದ್ಧಗೊಳಿಸಿರುವರು. ಆದರಿಂದ ಶಕ್ತಿವಿಶಿಷ್ಟಾದ್ವೈತ ಮತದಲ್ಲಿ ಚಾತುರ್ವರ್ಣ, ಚತುರಾಶ್ರಮಗಳು ತತ್ಪ್ರತಿಪಾದಕಗಳಾದ ಅಪರಿಮಿತ ಸಿದ್ಧಾಂತ ಗ್ರಂಥಗಳು ಇದ್ದಾಗ್ಯೂ ಈ ಮತದಲ್ಲಿ ಯಾವ ಭೇದವು ಇಲ್ಲದೆ ಇರುವದೆಂದು ಹೇಳುತ್ತಾ ಯಾವನು ರುದ್ರಾಕ್ಷಿಕಾಷಾಯಾಂಬರಗಳನ್ನು ಧರಿಸುತ್ತಾನೆಯೋ ಆತನೇ ಗುರುವೆಂದು ಹೇಳುತ್ತ, ಬಸವಾದಿ ಪ್ರಮಥರ ವಚನ, ಸಿದ್ಧೇಶ್ವರ ಪುರಾಣಗಳೇ ಇವರ ಸಿದ್ಧಾಂತ ಗ್ರಂಥಗಳು.

ನಮ್ಮ ಸ್ವಾತಂತ್ರ್ಯವನ್ನು ಹರಣಮಾಡಿ ಜಂಗಮರನ್ನು ಭಕ್ತ ಸಮೂಹದಲ್ಲಿ ಎಳೆಯಲಿಕ್ಕೆ ನಿಮಗೇನು ಅಧಿಕಾರವದೆ? ಇಂಥಹ ಸ್ವಾತಂತ್ರ್ಯ ಜಾಗ್ರತಿಯ ಕಾಲದಲ್ಲಿ ಗುರುಸ್ಥಲದ ಗಣಂಗಳು ಅನಾಕೃತ ವೈದಿಕ ಧರ್ಮದ ದೃಷ್ಟಿಯಿಂದಲೂ ತಮ್ಮ ಅನಾಕೃತ ಗುರುತ್ವವನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದಲೂ ಯೋಗ್ಯವಾಗಿರುವದು.

**ಪ್ರಶ್ನೆ:** ಪ್ರಸ್ತಾವನೆಯ ಪ್ರಲಾಪ, ಮಣ್ಣಿನಿಂದಾದ ಮಡಿಕೆ, ಚಿನ್ನದಿಂದಾದ ತೊಡಿಗೆ, ಕಂಚಿನಿಂದಾದ ತಳಿಗೆಬಟ್ಟಲು, ಕಬ್ಬಿಣದಿಂದಾದ ಕೊಡಲಿ, ಖಡ್ಗ, ಮೊದಲಾದವುಗಳ ಕಾರ್ಯ ಕಾರಣಕ್ಕೆ ಭಿನ್ನ ಉಂಟೇ? ಇಲ್ಲ ಎಂಬಂತೆ, ಮಹಾ ಲಿಂಗದಲ್ಲಿ ಜ್ಯೋತಿಯಿಂದ ಜ್ಯೋತಿ ಉದಯಿಸಿದಂತೆ ಉದಯಿಸಿದ ಶರಣಂಗೆ ಭಿನ್ನವೆಲ್ಲಿಯದೋ? ಶರಣಂಗೂ ಲಿಂಗಕ್ಕೂ ಅದ್ವೈತಾನದಿಂದ ಸಂಪೂರ್ಣತೆಯುಳ್ಳದ್ದಲ್ಲದೆ ಅಲ್ಲಿ ಮತ್ತೊಂದು ಸಂದೇಹ ಉಂಟೇ? ಅಲ್ಲಿ ಸಂಶಯ ಕಲ್ಪಿಸುವ ಮಾಯಾಭ್ರಾಂತರ ತೋರದಿರಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರ ಪರಮ ಪವಿತ್ರ ವಚನಾನುಸಾರ ಲಿಂಗಾಂಗಿಗಳೆಲ್ಲರೂ ಲಿಂಗೋದ್ಭವರೇ ಸರಿಯೆಂದು ಬರೆದಿದ್ದಾರೆ.

**ಉತ್ತರ:** ವರ್ಣಾಶ್ರಮ ಧರ್ಮ ಮೀರಿ ಅತಿ ವರ್ಣಾಶ್ರಮ ಧರ್ಮಿಗಳಾದ ತೋಂಟದ ಸಿದ್ಧಲಿಂಗೇಶ್ವರ ಸ್ವಾಮಿಯ ವಚನವನ್ನು ಉದಾಹರಣೆ **ತೋರಿಸಿರು**

ಏಕೆ? ಅವರು ಷಟ್‌ಸ್ಥಲಜ್ಞಾನದಲ್ಲಿ ಈ ವಚನ ನುಡಿದಿರುವರಲ್ಲದೇ ಕರ್ಮ ಸ್ಥಲದಲ್ಲಿ ನುಡಿದಿರುವದಿಲ್ಲ.

ವಚನ: ಬೀಜದೊಳಗಿಹ ವೃಕ್ಷದ ಫಲವ ಸವಿಯಬಹುದೇ? ಬಿಂದುವಿನಲ್ಲಿರ್ಪ ಸತಿಯ ಸಂಭೋಗವ ಸಂಘಟಿಸಬಹುದೇ? ಮಳೆಹನಿಯೊಳಿರ್ಪ ಹುರಮಂಜಿ ಮುತ್ತುಗಳಂ ಸರಗೊಳಿಸಿ ಕೊರಳೊಳು ಧರಿಸಬಹುದೇ? ಹಾಲೊಳಗಿರ್ಪ ತುಪ್ಪವ ಅರಿಸಿದರೆ ಸಿಕ್ಕಬಹುದೇ? ಕಬ್ಬಿನೊಳಗಿರ್ಪ ಬೆಲ್ಲವ ಕಣ್ಣಿಗೆ ಕಾಣಿಸಬಹುದೇ? ತನ್ನೊಳಗಿರ್ಪ ಶಿವತತ್ವ ನೆನೆ ಮಾತ್ರಣವೇ ಅನುಭವಕ್ಕೆ ಬರ್ಪುದೇ? ಭಾವಿಸಿ ತಿಳಿದು ಮಥಿಸಿ ಪ್ರಯೋಗಾಂತರದಿಂ ಪ್ರಸನ್ನಮಂ ಮಾಡಿಕೊಂಡು ತದನುಭವಸುಖ ಮೊಕ್ಕೋಲಾಡುವದು ಅತಿ ಚತುರನಾದ ಶಿವಶರಣಂಗಲ್ಲದುಳಿದ ವರ್ಗಕ್ಕುಂಟೇ? ಮಹಾ ಘನಮೊಡ್ಡ ದೇಶಿಕಾರ್ಯ ಗುರು ಪ್ರಭುವೇ

ಹಣ್ಣು ಬಯಸಿ ಬೀಜವನ್ನು ತಿನ್ನಬಹುದೇ? ತನ್ನಲ್ಲಿ ಬಿಂದುವಿದ್ದ ಮಾತ್ರಕ್ಕೆ ಸತಿ ಸಂಭೋಗವಿಲ್ಲದೇ ಮಕ್ಕಳು ಹುಟ್ಟಬಹುದೇ? ಸ್ವಾತಿ ಮಳೆಯ ಹನಿಗಳು ಕಪ್ಪೆಚಿಪ್ಪಿನಲ್ಲಿ ಬೀಳದ ಮುನ್ನ ಮುತ್ತಾಂದು ಸರಗೊಳಿಸಿ ಕಟ್ಟಲು ಬರುವದೇ? ಹಾಲೊಳಗೆ ತುಪ್ಪವದೆಯೆಂದು ಕೈ ಆಡಿಸಿದರೆ ಕೈಗೆ ಸಿಕ್ಕುವದೇ? ಕಬ್ಬಿನಲ್ಲಿರ್ಪ ಬೆಲ್ಲ ಕ್ರಮಗೊಳಿಸಿ ಮಾಡಿ ತೆಗೆಯದೆ ತಿನ್ನಲಿಕ್ಕೆ ಬೆಲ್ಲ ಸಿಗುವದೇ? ತನ್ನೊಳಗಿರ್ಪ ಶಿವ ತತ್ವವನ್ನು ಗುರುವು ಮಥಿಸಿ ತೆಗೆದು ತೋರಿಸಿದರೆ ಮಾತ್ರ ಶಿವ ತತ್ವಜ್ಞಾನ ಬರುವದಲ್ಲದೆ ಎಲ್ಲರೂ ಲಿಂಗೋದ್ಭವರೆಂಬುವ ಮಾತು ಮರುಳುತನದ್ದೇ ಸರಿ. ಎಲ್ಲರೂ ಲಿಂಗೋದ್ಭವರಾಗಿ ಸರಿ ಸಮಾನರಾದರೆ "ಗುರು, ಜಂಗಮ"ರೆಂಬ ಪೂಜ್ಯ ವಸ್ತುಗಳೇ ಇರುತ್ತಿದ್ದಿಲ್ಲ.

"ಸುಪ್ತವೇದಾಗಮದಲ್ಲಿ" "ವರ್ಣಾಶ್ರಮ ಪರಿಕ್ರಮಾನ್ ಅಪಾಕೃತ ಸದಾಚಾರಾನ್" ಎಂಬುದಾಗಿ ವರ್ಣಾಶ್ರಮ ಪರಿಕ್ರಮಗಳು ಅಪಾಕೃತ ಸದಾಚಾರಗಳೆಂದೇ ತಿಳಿದು ಬರುತ್ತದೆ. ಕ್ರಿಯಾಸಾರದ ೭ನೇ ಉಪದೇಶದಲ್ಲಿ: "ವರ್ಣಾಶ್ರಮ ಧರ್ಮಾಢ್ಯ, ವರ್ಣಾಶ್ರಮೋಚಿತ ಧರ್ಮ, ವರ್ಣಾಶ್ರಮ ಕ್ರಿಯಾ ವರ್ಣಾಶ್ರಮ ಸದಾಚಾರಃ" ಎಂಬವೇ ಮೊದಲಾದ ಉದಾಹರಣೆಗಳನ್ನು ಕಾಣಬಹುದಾಗಿದೆ.

ವರ್ಣಾಶ್ರಮ ಧರ್ಮದಂತೆ ನಡೆಯುವ, ಎಲ್ಲರೂ ಒಂದೇ ಅಂದರೆ ಇದನ್ನು ಸಮಾಜವು ಒಪ್ಪುವದೇ? ಮಕ್ಕಳೆಲ್ಲರೂ ಒಂದೇ ಸ್ವರೂಪ ಕಂಡಾಗ್ಯೂ ಇವು ನನ್ನ ಮಕ್ಕಳು, ಇವು ಪರರ ಮಕ್ಕಳು ಎಂಬ ಭೇದವು ಇಲ್ಲದಿದ್ದರೆ ತಮ್ಮ ತಮ್ಮ ಮಕ್ಕಳ ಪೋಷಣೆಯಲ್ಲಿ ಯಾರಿಗೂ ಆಶಕ್ತಿ ಹುಟ್ಟುತ್ತಿದ್ದಿಲ್ಲ. ಅದರಂತೆಯೇ ವೀರಶೈವ ಒಂದೇ ಇದ್ದರೂ ಗುರುಸ್ಥಲದ ಅಯ್ಯನವರು, ವಿರಕ್ತ ಜಂಗಮರು, ಪಟ್ಟದ ಚರಮೂರ್ತಿಗಳು, ಭಕ್ತರು ಎಂಬ ಭೇದ ಮತಹುಟ್ಟಿದಂದಿನಿಂದ ಇಲ್ಲೀ ಪರ್ಯಂತರ ತಮ್ಮ ತಮ್ಮ ನೇಮಕ್ಕನುಸಾರವಾಗಿ ಆಚರಿಸುತ್ತ ಇದ್ದಾರೆ ತಿಳಿಯಿರಿ.

**ಪ್ರಶ್ನೆ:** ಶಿವನ ಸೃಷ್ಟಿ, ಬ್ರಹ್ಮ ಸೃಷ್ಟಿ, ಸರಿಯಾಗಿರಬೇಕಲ್ಲವೇ? ಮತ್ತು ಶಿವಶರಣರೆಲ್ಲರ ಸಮತಾಭಾವದ ವಚನಗಳನ್ನು ನೋಡದ ಕುರುಡರೆಂದು ಕಂಡರೂ ಅರ್ಥ ಮಾಡಿಕೊಳ್ಳಲಾರದ ಮತಿಹೀನರೆಂದು ಬರೆದಿರುವರು.

**ಉತ್ತರ:**

ಶ್ಲೋಕ: ಪ್ರಮಥಾನ್ ವಿಶ್ವನಿರ್ಮಾಣ ಪ್ರಲಯಾದಿ ವಿಧಿಕ್ಷಮಾನ್ ।
ಸೃಷ್ಟ್ವಾ ಪ್ರಮಥವರ್ಗೇಷು "ವರ್ಣಾಶ್ರಮ" ಪರಿಕ್ರಮಾನ್ ।
ಅಪಾಕೃತ ಸದಾಚಾರಾನು ಪಾದಿಶಪಥಪ್ರಭುಃ ॥
ತಸ್ಮಾತ್ತದ್ಗೋತ್ರಜಾಃ ಸರ್ವೇ ಶಿವ ಭಕ್ತ್ಯಾ ।
ಧೃತವ್ರತಾಃ ಸುಪ್ರಭೇದಾಗಮ ಪ್ರಮಾಣ ॥

ಶಿವ ಸೃಷ್ಟಿ ಬ್ರಹ್ಮನಿಗೆ ತೋರಿಸಿದ್ದಿರುವದರಿಂದ ಶಿವ ಸೃಷ್ಟಿ ಸ್ವಲ್ಪ ಆಗಿದೆ, ಬ್ರಹ್ಮ ಸೃಷ್ಟಿ ಮಾಡುತ್ತ ಬಹಳ ಆಗಿದೆ. ಇವೆರಡು ಸಮ ಇರುವದಿಲ್ಲವೆಂಬುದು ನಿನಗೆ ತಿಳಿದಿಲ್ಲ. "ಪಾರಮೇಶ್ವರಾಗಮ" ಪಟಲ ೧೭ರಲ್ಲಿ:

ಶ್ಲೋಕ: ಬ್ರಾಹ್ಮಣಾ ವೀರಶೈವಸ್ಥಾಃ ಶಿವಾಯಜ್ಞೋಪವೀತಿನಃ ।
ಲಿಂಗರುದ್ರಾಕ್ಷ ಭಸ್ಮಾಂಕಾ ಬ್ರಹ್ಮಕರ್ಮ ಸಮಾಶ್ರಿತಾಃ ॥

ಇವರು ವಚನಗಳನ್ನು ಪೂರಾ ಓದದ ಮತ್ತು ಓದಿದರೂ ಆ ವಚನಗಳನ್ನು ಬಿಚ್ಚಿಟ್ಟು ಬಹಾದ್ದೂರರೆಂದು ಹೇಳಬೇಕಾಗುತ್ತದೆ. ಇಂಥ ಅರ್ಥಮರ್ಥ ಪಂಡಿತರೇ? ಇಕೋ ಈ ಶಿವಾಗಮವನ್ನು ನೋಡಿರಿ. 'ಚಾತುರ್ವರ್ಣಂ ಮಯಾಸೃಷ್ಟಂ' ಎಂಬ ಮಾತಿನಂತೆ ಆಯಾವರ್ಣ ಹಾಗೂ ಆಶ್ರಮದವರು ತಮ್ಮ ತಮ್ಮ ಕುಲ ಧರ್ಮ ಭಕ್ತಿ ರೀತಿಯನ್ನನುಸರಿಸಿ ಪೂರ್ವಿಕರು

ನಡಿಸಿಕೊಂಡು ಹೋಗಿರುವಂತೆ ನಡೆಯುವದು ಲೇಸು. ಸಮಾಜದಲ್ಲಿ ಕುಃ ಗಳಿಲ್ಲದಿದ್ದರೆ ಸಿದ್ಧರಾಮೇಶ್ವರನು ಹೀಗೇಕೆ ಹಾಡುತ್ತಿದ್ದನು.

ವಚನ: ಸರ್ವರೂ ಲಿಂಗವಂತರೆಂದು। ಮನದಲ್ಲಿ ಭಾವಿಸಿ ನಡೆಯಬೇಕಲ್ಲದೆ। ನಡೆನುಡಿಯಲ್ಲಿ ಭಾವಿಸಿ ನಡೆಯಬಾರದು ನೋಡಯ್ಯ। ಸರ್ವರೂ ಲಿಂಗವಂತರೆಂದು ಭಾವಿಸಿದಲ್ಲಿ ಪ್ರಾರ್ಥಿಸಗೊಳಬೇಕಲ್ಲದೇ ಪುರಹಃ ಕಪಿಲಸಿದ್ಧ ಮಲ್ಲಿಕಾರ್ಜುನನ ಮಂದಿರದ ನಿವಾಸಿಗಳೆಂದು ಭಾವಿಃ ಬಾರದು ನೋಡಯ್ಯ॥

ಈ ಪ್ರಕಾರ ಹಾಡಿರುವರಲ್ಲದೆ ಇನ್ನೂ ಅನಂತ ವಚನಗಳುಂಟು ಹೀಗೆ ಕುಲಾಶ್ರಯ ಮರೆಮಾಜುವ ಪಾಟೀಲರು ಕುರುಡರೋ? ಈ ವಚನ ಶಾಸ್ತ್ರ ಹಾಡಿದ ಶಿವಶರಣರು ಕುರುಡರೋ? ಶಾಸ್ತ್ರಿಗಳ ಸಮೂಹವು ಕುರು ಡರೋ? ವಾಚಕರೇ ವಿಚಾರಿಸಲಿ.

ಶ್ಲೋಕ: ಬ್ರಾಹ್ಮಣಸ್ತು ಸದಾಚಾರಿ। ಪುನರ್ಜನ್ಮನಿ ವೈಷ್ಣವಃ।
ತತ್ರ ವಿಷ್ಣುಪ್ರಸಾದೇನ। ಜಾಯತೇ ಶೂಲಪೂಜಕಃ।
ದಶಜನ್ಮ ಶಿವಾರ್ಚನೇನ। ಜಾಯತೇ ವೀರಶೈವಿನಃ।
ವೀರಶೈವ ಪುನರ್ಜನ್ಮ ಜಾಯತೇ ಚರಲಿಂಗಕಂ।
ಚರಲಿಂಗ ಮಹಾಯೋಗ ಪುನರ್ಜನ್ಮ ನ ವಿದ್ಯತೇ॥

ಹೀಗೆ ವೈಷ್ಣವ ಪುರಾಣದಲ್ಲಿ ಹೇಳಿದ್ದನ್ನು ವೀರಶೈವ ಮತೋತ್ಪತ್ತಿ ಗ್ರಂಥದಲ್ಲಿ ಉದಾಹರಿಸಿದ್ದಾರೆ.

ಬ್ರಾಹ್ಮಣನು ಸದಾಚಾರಿಯಾಗಿದ್ದರೆ ಮತ್ತೊಂದು ಜನ್ಮಕ್ಕೆ ವಿಷ್ಣು ಭಕ್ತ ನಾಗುವನು. ಆ ಜನ್ಮದಲ್ಲಿ ವಿಷ್ಣುವಿನ ಅನುಗ್ರಹದಿಂದ ಶೈವನಾಗುವನು. ಹಾಗೆ ಶೈವನಾಗಿ ಹತ್ತು ಜನ್ಮಗಳಲ್ಲಿ ಶಿವಪೂಜೆ ಮಾಡಿದ ಫಲದಿಂದ ಮತ್ತೆ ವೀರ ಶೈವನಾಗಿ, ಮತ್ತೊಂದು ಜನ್ಮದಲ್ಲಿ ಗುರುಸ್ಥಲ ಜಂಗಮನಾಗಿ ಹುಟ್ಟುತ್ತಾ ನೆಂದು ವೀರಶೈವಮತೋತ್ಪತ್ತಿಯಲ್ಲಿ ಹೇಳಿರುವದು. "ಸಿದ್ಧಾಂತಶಿಖಾಮಣಿ" ಯಲ್ಲಿ "ಸದಾಚಾರೈಕ ನಿರತೋ ಸದ್ವಂಶೇನಸಮುದ್ಭವಃ। ಏವ ಮಾದಿ ಗುಣೋಪೇತೋ ಗುರು ಪೀಠಾಧಿರೋಹಕಃ॥"

ಇಂಥ ಸದ್ವಂಶ ಗುರುಸ್ಥಲದವರು ಮತಸಿದ್ಧಾಂತ ಆಚಾರಾದಿಗಳ ಉದ್ಧಾರಾರ್ಥವಾಗಿ ಭಕ್ತಾದಿಗಳಿಗೆ ಸಹಾಯಕರಾಗಿದ್ದುಕೊಂಡು ಶಿವಾಜ್ಞೆ

ಯನ್ನು ಭೂತಲದಲ್ಲಿ ನೆರವೇರಿಸಿ ತಮ್ಮನ್ನಾಶ್ರಯಿಸಿದ ಭಕ್ತರನ್ನು ಧನ್ಯರನ್ನಾಗಿ ಮಾಡುತ್ತ ಬಂದಿದ್ದಾರೆ. ಇಂಥ ಗುರುಸ್ಥಲವನ್ನಳಿದು ಎಲ್ಲರನ್ನು ಭಕ್ತರನ್ನಾಗಿ ಮಾಡಿಬಿಟ್ಟಿದ್ದಾದರೆ ಚನ್ನಾಗಿತ್ತು. ವೀರಶೈವ ಮತಸ್ಥಾಪನಾಚಾರ್ಯರ ವಂಶಸ್ಥರಾದ ಗುರುಸ್ಥಲದ ಅಯ್ಯನವರಲ್ಲಿ ಭಕ್ತಿಯನ್ನಿಟ್ಟು ಏಕನಿಷ್ಠೆಯಿಂದ ಸಜ್ಜೆವರೆ ಮಾತ್ರ ಗೊತ್ತುಮಾಡಿದ ಮುಕ್ತಿಸ್ಥಲಕ್ಕೆ ಮುಟ್ಟಬಹುದಲ್ಲವೇ ? ಇವರು ಅಯ್ಯನವರಲ್ಲ, ಕೃತ್ರಿಮ ಕುಲದವರೆಂದು ಊಹಾಪೋಹಮಾಡುತ್ತ ನಿಂತುಬಿಟ್ಟರೆ ಸ್ವಾರ್ಥಸಂಶೋತ್ಪತ್ತಿಯಿಂದ ಪ್ರಯೋಜನವೇನು ? " ಸಂಶಯಾತ್ಮಾವಿನಶ್ಯತಿ " ಎಂಬಂತೆ ಕಡೆಗೆ ನೀವು ನಾಶಹೊಂದಬಹುದಲ್ಲದೆ ಬೇರೆ ಫಲವೇನೂ ಆಗುವದಿಲ್ಲ.

ವಚನ: ಭಕ್ತನಾದ ಬಳಿಕ ಭಕ್ತಿವಿಡಿದಾಚರಿಸುವದೆಂತಯ್ಯ ! ಭಕ್ತನಾದಬಳಿಕ ಭಕ್ತಿಯ ಹೊಲಬನ್ನರಿಯಬೇಕು ! ಭಕ್ತನಾದ ಬಳಿಕ ಜ್ಞಾನಕ್ರಿಯಾ ವಿವರ ವಿಚಾರಿಸಿ ನೋಡಬೇಕು ! ಭಕ್ತನಾದ ಬಳಿಕ ಅರುಹಿನ ಕುರುಹಿಡಿದು ಆಚರಿಸಬೇಕು ! ಭಕ್ತನಾದ ಬಳಿಕ ತಾಪತ್ರಯಕ್ಕೊಳಗಾಗದೇ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಐಕ್ಯ ಹೊಂದಬೇಕು !!

ವಚನ: ಅರಸು ಮುನಿದರೆ ನಾಡೊಳಗಿರಬಾರದಯ್ಯ ! ಗಂಡಮುನಿದರೆ ಹೆಂಡತಿಯಾಗಿರಬಾರದಯ್ಯ ! ಗುರು ಜಂಗಮರು ಮುನಿದರೆ ನಾನೆಂತು ಬದುಕುವೆನಯ್ಯ ಕೂಡಲಸಂಗಮದೇವ !!

ವೀರಶೈವ ಧರ್ಮನಿಷ್ಠರು ಪರಸ್ಪರ ಕಲಹ ಬೆಳೆಸಲಾರರು. ಯಾಕಂದರೆ ಭಕ್ತರು ಜಂಗಮರಾಗಬೇಕಾದರೆ ದೀಕ್ಷಾ ಕ್ರಿಯಾಯಿಲ್ಲವೆಂಬ ಮಾತ್ಸರ್ಯ ಮೂಲವಾದ ಕಲಹವನ್ನು ಬಿಡುವದು, ತನ್ನಂತೆ ಪ್ರಾಣಿ ಮಾತ್ರಗಳನ್ನು ನೋಡುವದು ಧರ್ಮನಿಷ್ಠರ ಲಕ್ಷಣವಾಗಿರುತ್ತದೆ. ಬಸವಾದಿ ಪ್ರಮಥರ ನಿರ್ಮಲ ಮಾರ್ಗಗಳು ಭಕ್ತಾದಿಗಳಿಗೆ ಸಂಪಾದಿಸಿಟ್ಟಿರುವ ದಿವ್ಯವಾದ ಗುಪ್ತ ನಿಧಿಗಳಂತಿರುವವು. ಜಂಗಮರಲ್ಲಿಟ್ಟಿರುವ ಭಕ್ತಿಯ ನಡತೆಯನ್ನು ನೋಡಿದರೆ ಇವರ ಸತ್ಯತೆಯು ಕಂಡುಬರುವದು. ಈ ಲಕ್ಷಣಗಳಿಲ್ಲದ ಕಲಹಲಂಪಟರನ್ನು ಧರ್ಮದ್ರೋಹಿಗಳೆಂದು ತಿಳಿಯಬೇಕಾಗುತ್ತದೆ; ಇಂಥವರು ಆತ್ಮಘಾತಕಿಗಳಾಗುವರಲ್ಲದೆ ಇವರ ಅನುಕರಣ ಮಾಡುವ ಗದಗ ಶರಣಸೇವಾ ಸಂಘದವರು

ಅಜ್ಞಾನದಿಂದ ತಮ್ಮ ಹಟವನ್ನು ಉಪಯೋಗಿಸಿಕೊಂಡರೆ ಅದರಲ್ಲಿ ಧರ್ಮದ ದೋಷವಿಲ್ಲ. ಜಗಳಗಂಟರು ಯಾವ ಧರ್ಮದವರಾದರೂ ತಮ್ಮ ಹಟವನ್ನೇ ಸಾಧಿಸಹೋಗಿ ಸಮಾಜವನ್ನು ಗೊಂದಲದಲ್ಲಿ ಕೆಡವುವರು.

**ಪ್ರಶ್ನೆ:** ಲಿಂಗವಂತರು ಲಿಂಗವಂತರಲ್ಲಿ ಹೆಚ್ಚುಕಡಿಮೆಯ ಭಾವನೆಯನ್ನು ಮಾಡಕೂಡದು. ಎಲ್ಲರೂ ಶಿವರೂಪರೆಂದು ತಿಳಿದು ಸಮಾನಮನ್ನಣೆಕೊಡಬೇಕು. ಶರೀರ ಸಂಬಂಧ ಮಾಡಬೇಕು. ಒಬ್ಬರಿಗೊಬ್ಬರು ಸಹಕರಿಸಬೇಕಲ್ಲದೆ ಕಾಯಕದಲ್ಲಿ ಹೆಚ್ಚುಕಡಿಮೆ ಕಂಡು, ಲಿಂಗಾಂಗಿಗಳಲ್ಲಿ ಹೆಚ್ಚುಕಡಿಮೆಯೆಂದು ಭಾವಿಸಬಾರದು. ಇದೇ ಸದಾಚಾರ.

**ಉತ್ತರ:**

ವಚನ: ಆವನ ಕಾಯಕದ ವಿಚಾರಿಸದೆ ಆವನ ಮನೆಯ ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏಳನೆಯ ಪಾತಕ, ಇಂತಪ್ಪ ಗುರುಶಿಷ್ಯ ಜಂಗಮರ ಬಾಳುವೆ ಹುಲಿ ಕನಿಲೆಯ ತಿಂದು, ಮಿಕ್ಕಿತ ನರಿ ತಿಂದಂತಾಯಿತ್ತು ಕಾಣಾ ಕೂಡಲಸಂಗಮದೇವಾ!

ಲಿಂಗವಂತರಲ್ಲಿ ಲಿಂಗ ಧರಿಸಿದವರೆಲ್ಲರಿಗೂ ಅಷ್ಟಾವರ್ಣ ಸರಿಯಾಗಿಯೇ ಆವೆ. ಕುಲ ಮಾತ್ರ ಭಿನ್ನವಿದ್ದು ತಮ್ಮ ಕುಲದಲ್ಲಿಯೇ ತಾವು ಶರೀರ ಸಂಬಂಧ ಮಾಡಬೇಕಲ್ಲದೆ ಕುಲಗೇಡಿಗಳಾಗಬಾರದು. ಸಮಾಜ ಕಾರ್ಯದಲ್ಲಿ ಮಾತ್ರ ಸಹಕರಿಸಿ ನಡೆಯಬೇಕು. ಕಾಯಕದಲ್ಲಿ ಹೆಚ್ಚು ಕಡಿಮೆ ಆದೆ. ಕಿರಾಣಿ ಅಂಗಡಿ ಕಾಯಕದವನು ತನ್ನ ಕಾಯಕಕ್ಕೆ ಕಲಂಕ ಹತ್ತುವ ಹೇಯವಾದ ವಸ್ತುಗಳನ್ನು ಮಾರಲು ಎಂದೂ ಒಪ್ಪಲಾರ. ಬಟ್ಟೆಗಳನ್ನು ಹೊಲಿಯುವ ಕಾಯಕದ ಶಿವಸಿಂಪಿಗನು ಚರ್ಮದ ವಸ್ತುಗಳನ್ನು ಅಂದರೆ ಪಾದರಕ್ಷೆಯನ್ನು ಹೊಲಿಯಲು ಎಂದೂ ಒಪ್ಪಲಾರ. ಹೀಗಿದ್ದು ವರ್ಣಸಂಕರ, ಜಾತಿ ಸಂಕರ ಮಾಡಬಾರದೆಂದು ವೀರಶೈವ ಧರ್ಮ ಕಟ್ಟಳೆಯ ಕಾಯಿದೆಗಳು ಹೀಗೆ ಹೇಳುತ್ತವೆ. ನೋಡಿರಿ.

ಶ್ಲೋಕ: ತತೋ ವೇದಾಂತ ಸಾರಜ್ಞಾಸ್ತತಃ ಸನ್ಯಾಸಿನಃ ಪರಾಃ।
ತತಃ ಪಾಶುಪತಾಃ ಶ್ರೇಷ್ಠಾ ಲಿಂಗಿನಸ್ತುತ ತೋಧಿಕಾಃ॥
ತತೋಧಿಕಾ ಮಹಾ ಶ್ರೇಷ್ಠಾ ವೀರಮಾಹೇಶ್ವರಾಃ ಶಿವೇ।
ನತೇಭ್ಯೋಹ್ಯಧಿಕಃ। ಕಶ್ಚಿದ್ವೀರ ಶೈವಾಶ್ರಯಾತ್ಪರಃ॥

ಈ ಪದ್ಯವು ಸನ್ಯಾಸಿಗಳಿಗಿಂತಲೂ ಪಾಶುಪತಿ ರಧಿಕ, ಪಾಶುಪತರಿಗಿಂತಲೂ ಲಿಂಗಿಗಳಧಿಕ, ಲಿಂಗಿಗಳಿಗಿಂತಲೂ ವೀರಮಹೇಶ್ವರರತ್ಯಧಿಕವೆಂದು ನುಡಿಯುತ್ತದೆ.

ಶ್ಲೋಕ: ಯೋಹಸ್ತೇ ಪೀಠೇ ನಿಜಮಿಷ್ಟಲಿಂಗಂ ವಿನಸ್ಯ ತಲ್ಲೀನಮನಃ ಪ್ರಚಾರಃ।
ಬಾಹ್ಯಕ್ರಿಯಾ ಸಂಕುಲ ನಿಸ್ಪ್ರಹಾತ್ಮಾ ಸಂಪೂಜಯ ತ್ಯಂಗಸ ವೀರಶೈವಃ॥

ಶಾಂಕರ ಸಂಹಿತಾ ವಚನಾನುಸಾರವಾಗಿ ವೀರಶೈವನೆನಿಸುವವನಿಗೆ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಲಿಂಗಾಂಗ ಸಾಮರಸ್ಯಗಳೇ ಅಂಗಗಳು.

ಪಾರಮೇಶ್ವರಾಗಮದಲ್ಲಿ:

ಶ್ಲೋಕ: ಶೈವಂ ಸಪ್ತವಿಧಂ ಜ್ಞೇಯಂ ವೀರಶೈವಾದಿ ಭೇದತಃ।
ವೀರಶೈವಂ ತಥಾನಾದಿ ಶೈವಮಾದಿಪರಂತಥಾ।
ಅನುಶೈವಂ ಮಹಾಶೈವಂ॥

ಇತ್ಯಾದಿ ವಚನಗಳಿಂದ ಸಾರುತ್ತಿವೆ. ಈ ವೀರಶೈವ ಮತವನ್ನು ಬ್ರಾಹ್ಮಣಾದಿ ನಾಲ್ಕು ವರ್ಣದವರು ಅವಲಂಬಿಸಿರುವದು ಲೋಕ ಪ್ರಸಿದ್ಧವಾಗಿದೆ. ಮತ್ತು ವೇದಗಳ ಮೇಲೆ ಸಾಂಖ್ಯಯೋಗ, ನ್ಯಾಯ, ವೈಶೇಷಿಕ, ಪೂರ್ವ ಮೀಮಾಂಸೆ, ಉತ್ತರ ಮೀಮಾಂಸೆಗಳೆಂಬ ಷಡ್ದರ್ಶನಗಳು ಹುಟ್ಟಿರುವಂತೆ ಆಗಮಗಳ ಮೇಲೆ ವೀರಶೈವ ಮತ, ವೈಷ್ಣವ, ಶಾಕ್ತ, ಸೌರ, ವೈನಾಯಕ, ಕಾಪಾಲಿಕ ಎಂಬುದಾಗಿ ಆಗಮ ಸಾಂಪ್ರದಾಯಗಳ ಷಡ್ದರ್ಶನಗಳು ಹುಟ್ಟಿರುವವು. ಉದಾ:

ಶ್ಲೋಕ: ಶ್ರೀ ವೀರಶೈವ ಮತ, ವೈಷ್ಣವ, ಶಾಕ್ತ, ಸೌರ, ವೈನಾಯಕಾನಿ, ಮಹಿತಾನಿ ಶಿವಾಗಮೇಷು। ಕಾಪಾಲಿಕೇನ ಸಹಿತಾನಿವಪಂತಿ ಸಂತಷಡ್ದರ್ಶನಾನಿ ವಿದಿತಾಗಮ ಸಂಪ್ರದಾಯಾಃ॥

ಹೀಗೆ ವೀರಶೈವ ಧರ್ಮ ಶಿರೋಮಣಿಯಲ್ಲಿ ಹೇಳಿದೆ.

ಶ್ಲೋಕ: ವೀರಶೈವಂ ವೈಷ್ಣವಂ ಚ ಶಾಕ್ತಂ ಸೌರಂ, ವಿನಾಯಕಂ।
ಕಾಪಾಲಮಿತಿ ವಿಜ್ಞೇಯಂ ದರ್ಶನಾನಿ ಷಡೇವಹಿ॥

ಎಂದು ಪಾರಮೇಶ್ವರಾಗಮದಲ್ಲಿ ಹೇಳಲ್ಪಟ್ಟಿರುವದು.

ಅದರೊಳಗೆ ವೀರಶೈವರಲ್ಲಿ ಅನಾದಿಶೈವ, ಆದಿಶೈವ, ಅನುಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ, ವೀರಶೈವ ಎಂಬುದಾಗಿ ಏಳು ಸೋಪಾನ

ಗಳಿರುವವು. ಅವುಗಳೊಳಗೆ ಮೊದಲಿನ ಆರು ಸೋಪಾನಗಳಲ್ಲಿ ವರ್ಣಾಶ್ರಮಗಳ ಭೇದಗಳುಂಟು. ಏಳನೆಯದಾದ ವೀರಶೈವ ಸೋಪಾನದಲ್ಲಿ ವರ್ಣಾಶ್ರಮಗಳು ಇಲ್ಲದೇ ಇರುವದರಿಂದ ವೀರಶೈವನಾದ ವಿರಕ್ತನಿಗೆ ಮಾತ್ರ ಅತಿ ವರ್ಣಾಶ್ರಮಿ, ಷಟಸ್ಥಲಬ್ರಷ್ಮಿ, ಶಿವಯೋಗಿ, ಲಿಂಗಾರೂಢ, ನಿರಂಜನ ಜಂಗಮ, ನಿರಾಭಾರಿ ಜಂಗಮ ಎಂಬುದಾಗಿ ಪರ್ಯಾಯನಾಮಗಳು ಪ್ರಸಿದ್ಧವಾಗಿ ಬಂದಿರುವವು.

ಇದನ್ನೆಲ್ಲ ತಿಳಿಯದೆ, ವೀರಶೈವರೆಲ್ಲರೂ ಅತಿ ವರ್ಣಾಶ್ರಮಿಗಳೆಂದು ಹೊರಟಿರುವ ಅ. ಮ. ಪಾಟೀಲ, ಶರಣ ಸಂಘ, ಗದಗ ಇವರು ಸರ್ವನಾಶಕರವಾದ ಹಾದಿಯನ್ನು ಹಿಡಿಯದೆ ಮಹಾತ್ಮರಾದ ಪಂಚಾಚಾರ್ಯರು ತೋರಿಸಿದ ವರ್ಣಾಶ್ರಮ ಧರ್ಮ ಮಾರ್ಗದಲ್ಲಿಯೇ ನಡೆಯಲಿ. ತಮ್ಮ ಕ್ಷುದ್ರ ಮನಸ್ತಾಪಗಳನ್ನು ಮರೆತು ವರ್ಣಾಶ್ರಮ ಧರ್ಮದಂತೆ ನಡೆದು ಕೀರ್ತಿ ಕಾಯರಾಗಲಿ.

**ಪ್ರಶ್ನೆ:** ವೀರಶೈವ ಭಕ್ತಾದಿಗಳು ಬ್ರಾಹ್ಮಣರೆಂದು ಹೇಳುತ್ತವೆ. ಈ ಸದಾಚಾರವು ಬಹುಜನರಲ್ಲಿ ವಿಶೇಷವಾಗಿ ಅಯ್ಯನವರೆಂದು ಹೇಳಿಕೊಳ್ಳುವವರಲ್ಲಿ ಮಾಯವಾಗಿ ಮಾಯಿಕ ರಕ್ತಬಂಧುತ್ವ ಮೋಹವೆಂಬ ಮಹಾರೋಗವು ಬೆಳೆಯುತ್ತಿರುವದರಿಂದ ಅವರ ನಿವಾರಣೆಗಾಗಿ ಈ ಗ್ರಂಥ ರಚನೆಯಾಗಿದೆ. ಎಂದು ಬರೆದಿರುವರು.

**ಉತ್ತರ:** ಶ್ರೀಮಾನ್ ಮರಿ ತೋಂಟದಾರ್ಯರು ತಮ್ಮ ವೀರಶೈವಾನಂದ ಚಂದ್ರಿಕೆಯ ೪೫೪ನೆಯ ಪುಟದಲ್ಲಿ “ ಸರ್ವ ವರ್ಣೋತ್ತೀರ್ಣಾನಾಮ ಪ್ರಾಕೃತ ಬ್ರಾಹ್ಮಣಾದಿ ಧರ್ಮ ನಿರತ ತಯೋಪರಿ ದೃಶ್ಯ ಮಾನಾನಾಂ ವೀರಶೈವಾನಾಂ ಸರ್ವೋತ್ತಮತ್ವಂ ನಿರ್ವಿವಾದಂ ” ಹೇಗಿರುವದರಿಂದ ಎಲ್ಲ ಪ್ರಾಕೃತ ವರ್ಣಗಳಿಗೆ ಮಿಗಿಲಾಗಿಯೂ ಅಪ್ರಾಕೃತ ಬ್ರಾಹ್ಮಣಾದಿ ಧರ್ಮಗಳಲ್ಲಿ ನಿರತರಾದ ವೀರಶೈವ ಮಠಸ್ಥರೇ ಶ್ರೇಷ್ಠರೆಂದು ತಿಳಿ.

ಶ್ಲೋಕ: ಕಿಮಾಹುರ್ಭರತ ಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಾಃ ।
ಬ್ರಾಹ್ಮಣಂ ಲಿಂಗಿನಂ ಚೈವ ಬ್ರಾಹ್ಮಣಂ ವಾಪ್ಯಲಿಂಗಿನಂ ॥
ಸ್ವವೃತ್ತಿ ಮಭಿಪನ್ನಾಯ ಲಿಂಗಿನೇ ಚೇತರಾಯಚ ।
ದೇಯ ಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ ॥

ಎಂಬೀ ಮಹಾಭಾರತ ವಚನವು ವೀರಶೈವರಲ್ಲಿ ಬ್ರಾಹ್ಮಣ್ಯವನ್ನು ಜಾಗ್ರತಗೊಳಿಸುತ್ತದೆ. "ಬ್ರಾಹ್ಮಣೋಽಸ್ಯ ಮುಖಮಾಸೀತ್" ಎಂಬ ವೇದ ವಾಣಿಯು ಪರಶಿವನ ಪಂಚ ಮುಖೋತ್ಪನ್ನ ನಂದೀಶ್ವರಾದಿ ಗಣವಂಶೀಯರಾದ ವೀರಶೈವರಲ್ಲಿ ವಂಶದಿಂದ ಬ್ರಾಹ್ಮಣ್ಯವನ್ನು ಪ್ರತಿಪಾದಿಸುತ್ತದೆ. ಹೀಗೆ ವಂಶಜ್ಞಾನ, ಕ್ರಿಯಾ, ಶಿವದೀಕ್ಷಾದಿ ಸಂಸ್ಕಾರಗಳಿಂದ ಅಪ್ರಾಕೃತ ಬ್ರಾಹ್ಮಣರಾದ ವೀರಶೈವಾಶ್ರಮಿಗಳು ಯಜ್ಞಾದಿ ಪ್ರಾಕೃತ ಕರ್ಮಕಾಂಡವನ್ನು ದಾಟಿ ಕೇವಲ ಭಕ್ತಿಜ್ಞಾನಕಾಂಡದಲ್ಲಿ ನಿಷ್ಠರಾಗಿರುವದರಿಂದ ಇವರಿಗೆ ಪ್ರಾಕೃತ ಬ್ರಾಹ್ಮಣರಂತೆ ಕರ್ಮಾಂಗ ಭೂತಗಳಾದ ಶಿಖಾಸೂತ್ರ (ಜುಟ್ಟ–ಜನಿವಾರ) ಗಳಿಲ್ಲ.

ಶ. ಮು. ಪಾಟೀಲರೇ ಸರ್ವಲಿಂಗಾಂಗಿ ಭಕ್ತಾದಿಗಳು ಬ್ರಾಹ್ಮಣರಾದರೆ ನಿಮ್ಮ ಮನೆಯಲ್ಲಿ ನಿಮ್ಮ ಮಕ್ಕಳಿಗೆ ನೀವೇ ಲಿಂಗ ಕಟ್ಟಿ, ನಿಮ್ಮ ಕಾಲಿಗೆ ನೀವೇ ನಮಸ್ಕಾರ ಮಾಡಿಕೊಳ್ಳಬೇಕಾಗುತ್ತಿತು. ಹಾಗಲ್ಲದೆ, ಈ ಮತ ಹುಟ್ಟಿದಂದಿನಿಂದಲೂ ಇಲ್ಲೀ ಪರ್ಯಂತರ ವೀರಶೈವ ಮತದ ಸ್ಥಾಪನಾಚಾರ್ಯರ ವಂಶಜರಾದ ಮಠದಯ್ಯನವರೇ ಭಕ್ತಾದಿಗಳ ಮನೆಯಲ್ಲಿ ಲಿಂಗಧಾರಣ, ದೀಕ್ಷೆ, ಮಂತ್ರೋಪದೇಶ ಮಾಡಿಸುವದು. ಭಕ್ತಾದಿಗಳಲ್ಲಿ ಏನಾದರೂ ಅನಾಚಾರ ನಡೆದದ್ದಾದರೆ ಅವರಿಗೆ ತಕ್ಕ ಪ್ರಾಯಶ್ಚಿತ್ತ ಪೂರ್ವಕವಾಗಿ ದೀಕ್ಷಾದಿಗಳಿಂದ ಶುದ್ಧಗೊಳಿಸಿ, ವೈದಿಕ ಅಪ್ರಾಕೃತ ಬ್ರಾಹ್ಮಣರಾಗಿಕೆ ಲಸ ಮಾಡುವ ಮಠದಯ್ಯನವರೇ ಬ್ರಾಹ್ಮಣರು. ಇತರ ಭಕ್ತಾದಿಗಳು ವೈದಿಕ ಬ್ರಾಹ್ಮಣರಲ್ಲವೆಂಬುದೇ ಸಿದ್ಧಾಂತವು.

**ಪ್ರಶ್ನೆ:** ಭಕ್ತನಿಗಿಂತ ಮೊದಲು ಜಂಗಮನಿದ್ದನೆಂಬ ಮಾತು ಮರಳುತನವ್ದೇ. ಲಿಂಗಕ್ಕಾಧಾರ ಭಕ್ತ, ಜಂಗಮಕ್ಕಾಧಾರ ಭಕ್ತ, ಸರ್ವಕ್ಕಾಧಾರ ಭಕ್ತನೆಂದು– ವಿದ್ಯಾರ್ಥಿಗಳಿದ್ದರೆ ಶಿಕ್ಷಕ ಬರುವನು. ಹಾಗೆ ಭಕ್ತರಿದ್ದರೆ ತರುವಾಯ ಗುರುಜಂಗಮರ ಆವಶ್ಯಕತೆಯುಂಟಾಗಿ ಅವರು ತಲೆದೋರಿದರು; ಎಂದು ಬರೆದಿರುವರು.

**ಉತ್ತರ:** ಜಂಗಮನಕಿಂತ ಮೊದಲು ಭಕ್ತನಿದ್ದನೆಂಬ ಮಾತು ಗಗನ ಕುಸುಮದಂತೆಯೇ ಸರಿ. ಮೂಗು ಮಾಡಿದ ದೇವರನ್ನು ಬಿಟ್ಟು ಮೂಗುತಿ ಮಾಡಿದ ಅರ್ಕಾಚಾರಿಯನ್ನು ಹೊಗಳಿದಂತೆ ಭೂಲೋಕದಲ್ಲಿ ಮತಸ್ಥಾಪನಾ

ಚಾರ್ಯರೇ ಮೂಲ ಗುರುಗಳು. ಅವರ ಸಂಗಡ ಪ್ರತಿಬಿಂಬದಂತಿದ್ದ ನಿರಂಜನ ಜಂಗಮನುದಯಿಸಿದನೆಂದು ವೇದಾಗಮ ಸ್ಮೃತಿಗಳು ಹೇಳುತ್ತಿದ್ದು, ಭೂಮಿಯಿಲ್ಲದೆ ಮನೆ ಎಲ್ಲಿ ಕಟ್ಟುತ್ತಿದ್ದರು? ವಿದ್ಯಾರ್ಥಿಗಳಿದ್ದರೆ ಶಿಕ್ಷಕನೆಂದು ಬರೆದಿರುವ ಇವರ ಬುದ್ಧಿಗೆ ಏನನ್ನಬೇಕೆಂಬುದನ್ನು ವಾಚಕರೇ ಅನ್ನಲಿ. ಭೂಮಿಯನ್ನು ದೇವರು ಹುಟ್ಟಿಸದಿದ್ದರೆ ನೀವೆಲ್ಲಿಮ್ದು ಮನೆ ಕಟ್ಟುತ್ತಿದ್ದಿರಿ? ಸರಸ್ವತಿಯೇ ವಿದ್ಯಾದಾನ ಮಾಡದಿದ್ದರೆ ಮಾಸ್ತರರೆಲ್ಲಿ ಕಲಿಯುತ್ತಿದ್ದರು? ಪಂಚಾಚಾರ್ಯರು ವೀರಶೈವ ಮತಮನ್ನು ಸ್ಥಾಪಿಸದಿದ್ದರೆ ಲಿಂಗಾಂಗಿಗಳಾಗೆಲ್ಲಿರುತ್ತಿದ್ದರು? ಇಂಥ ಅಸಂಬದ್ಧವಾದ ಲೇಖ ಬರೆದರೆ ನಿಮ್ಮ ಬರಹವನ್ನು ಜ್ಞಾನಿಗಳು ಒಪ್ಪುವರೇ? ಜಂಗಮದ ಉತ್ಪತ್ತಿಯನ್ನು ವೇದಾಗಮ ಸ್ಮೃತಿಗಳು ಹೀಗೆ ಹೇಳಿರುವವು. ನೋಡಿರಿ,

ಶ್ಲೋಕ: ದೇವದೇವ ಜಗನ್ನಾಥ ಕರುಣಾಕರ ಶಂಕರ. ಆಗಮೇ ಬಹುದಾ ಪ್ರೋಕ್ತಂ ಶಿಷ್ಯಪಾಪಂ ಗುರೋರಿತಿ। ಏತಸ್ಮಾತ್ಕಾರಣಾತ್ ಸ್ವಾಮಿನ್ ವಯಂ ಭೀತೋಸ್ಸದಾಶಿವ। ತೇಸ್ವಿತ್ಯುಕ್ತೇಷು ಭೋದೇವಿ ಗಣಾಧಿಶೇಷು ಪಂಚಸು। ಮೇಶಿಖಾಚಕ್ರ ಮಧ್ಯಸ್ಥಂ ಚರಲಿಂಗಂ ನಿರಂಜನಂ ಕೃತ್ವಾ ಬಹಿರ್ಗತಂತೇಭೋಮಯಾ ಪ್ರೋಕ್ತಮಿದಂವಚಃ। ಮಮೈತಜ್ಜರಲಿಂಗಂತು ಮತ್ತಶ್ಚತಗುಣಾಧಿಕಂ। ಇತ್ಯುಕ್ತ್ವಾಗಣ ಪಂಚೇ ಭೋವತ್ವಾ ಜಂಗಮಲಿಂಗಕಂ। ಪ್ರೇಷಿತಂ ಧರಣೀ ಭಾಗೆ ಶೃಣು ಶಂಕರಿ ಸಾದರಂ॥

ಶ್ರೀ ಮದ್ರೇಣುಕಾಚಾರ್ಯರನ್ನು ಶಿವಧರ್ಮ ಸ್ಥಾಪನಾರ್ಥವಾಗಿ ಭೂಲೋಕದಲ್ಲಿ ಅವತರಿಸಬೇಕೆಂದು ಪರಶಿವನಾಜ್ಞಾಪಿಸಲು ಶಿಷ್ಯಪಾಪವು ಗುರುವಿಗೆಂದು ಪ್ರಮಾಣವಿರುವದರಿಂದ, ಇದಕ್ಕಾಗಿ ನಾವು ಭೀತರಾಗಿರುವೆವೆಂದು ಹೇಳಿದ್ದಕ್ಕೆ ಶಿವನು ತನ್ನ ಶಿಖಾಮಧ್ಯಗತನಾಗಿದ್ದ ಆ ನಿರಂಜನ ಜಂಗಮನನ್ನು ಇವರ ಕೂಡ ಕಳುಹಿಸಿ, ಈ ಜಂಗಮಾರಾಧನೆಯಿಂದ ಶಿಷ್ಯಸಂಬಂಧವಾದ ಪಾಪಕ್ಕೊಳಗಾಗದೆ ಭೂಲೋಕದಲ್ಲಿ ಧರ್ಮಸಂಸ್ಥಾಪನೆಯಂ ಮಾಡಿರೆಂದು ಆಜ್ಞಾಪಿಸಿ ಕಳುಹಿಸಿದನೆಂದು ಅಚಿಂತಾಗಮ ವಚನ ಮೇರೆಗೆ ಭೂಲೋಕದಲ್ಲಿ ಅವತರಿಸಿದ ನಿರಂಜನ ಜಂಗಮಾಂಶಭೂತರೇ ನಿರಾಭಾರಿ ವೀರಶೈವರೆಂಬ ವಿರಕ್ತಾಶ್ರಮಿಗಳು ಶ್ರೀ ರೇಣುಕಾದಿ ಪಂಚಾಚಾರ್ಯರ ವಂಶೀಭೂತರಾದವರೇ ಸಂಸಾರ ಸಹಿತರಾದ ಗುರುಸ್ಥಳ ಜಂಗಮರಾಗಿರುವರೆಂದು ಶಾಸ್ತ್ರ ಸಾರುತ್ತಿದೆ.

ಶ್ಲೋಕ: ಸ್ವಯಂ ಜ್ಯೋತಿರೇಕ ಮೇವಾ ದ್ವಿತಿಯೋ ಬ್ರಹ್ಮ। ಅಸ್ತಿ ಸಚ್ಚಿತ್ಸುಖಾಕಾರ ಮಲಕ್ಷಣ ಪದಾಸ್ಪದಂ। ನಿರ್ವಿಕಲ್ಪಂ ನಿರಾಧಾರಂ ನಿರಸ್ತಾಶೇಷ ನಿಪ್ಲವಂ। ಪರಿಚ್ಛೇದ ಕಥಾಶೂನ್ಯಂ ಪ್ರಪಂಚಾತೀತ ವೈಭವಂ। ಪ್ರತ್ಯಕ್ಷಾದಿ ಪ್ರಮಾಣಾ ನಾಮ ಗೋಚರ ಪದೇಸ್ಥಿತಂ॥

ಜಗದಾದಿ ಸೃಷ್ಟಿಗೆ ಪೂರ್ವದಲ್ಲಿ ನಾಮರೂಪ ಕ್ರಿಯಾಶೂನ್ಯಮಾದ ಜನನ, ಮರಣ ರಹಿತವಾದ ಮತ್ತೊಂದರ ಉಪಮಾನವಂ ಹೇಳುವದಕ್ಕಾಸ್ಪದವಿಲ್ಲದ ಸಚ್ಚಿದಾನಂದ ಸ್ವರೂಪವಾದ ವಸ್ತುವಿತ್ತು. ಈ ಮಹಾ ವಸ್ತುವನ್ನೇ ಪರಬ್ರಹ್ಮವೆಂದು ಶಿವತತ್ವಾರ್ಥ ಪ್ರವೀಣರಾದ ಮಹರ್ನಿಯರು ಹೇಳುವರು. ಇಂಥ ವಸ್ತುವಿನಲ್ಲಿ ತನ್ನ ಲೀಲಾವಿನೋದದಿಂದ ಚೇತನಾಚೇತನ ದಿಂಮೊಡಗೂಡಿದ ಸಕಲ ಜಗತ್ತು ಉತ್ಪತ್ತಿಯಾಗುವದು ಅಲ್ಲಿಯೇ ಲಯಿಸುವದು. ಹೀಗೆ ಲೀನವಾದ ಜಗತ್ತನ್ನು ಪುನಃ ಸೃಷ್ಟಿಸಬೇಕೆಂಬಿಚ್ಛೆಯುಂಟಾದ ಕೂಡಲೆ ಆಶ್ಚರ್ಯಕರವಾದ ರೂಪವನ್ನು ಧರಿಸಿ ನಿರಂಜನ ಜಂಗಮವು ಸ್ವಯಂ ಆವಿರ್ಭವಿಸಿತು. "ವೀರಶೈವಾಮೃತ ಪುರಾಣ" ಮೊದಲನೇ ಖಾಂಡ ನಾಲ್ಕನೇ ಸಂಧಿ ವಿರಾಗಮಸಾಕ್ಷಿಯಲ್ಲಿ:

ಶ್ಲೋಕ: ಮಕುಟೇ ಶೂನ್ಯಸಂಜಾತಂ ಶೂನ್ಯಾಜ್ಜಾತಂ ಚಿದಂಬರಂ। ಚಿದಂಬರಾಚ್ಛಿವಾಶಕ್ತಿಃ ಪರಾಶಕ್ತಿರಭೂತ್ತತಃ॥ ತಸ್ಯತಸ್ಯ ಸಹಸ್ರಾಂಶೆ ಪಂಚಸಾದಾಖ್ಯ ಮುದ್ಭವಂ। ತೇಷಾಂ ಸಹಸ್ರಕಾಂ ಶೇತು ಮಾಹೇಶ್ವರ ಸಮುದ್ಭವಂ॥ ತಸ್ಯ ಕೋಟಿ ಸಹಸ್ರಾಂಶೆ ವಿಗ್ರಹಂ ಪಂಚ ವಿಂಶತಿಃ। ತದಂಸೆ ಸಂಭವೋರುದ್ರಸ್ತಸ್ಮಾದ್ದೇವೋ ಜನಾರ್ಧನಃ॥ ವದನೆ ಬ್ರಾಹ್ಮಣಸ್ತಸ್ಯ ಬಾಹೌಚಕ್ಷ ತ್ರಿಯಸ್ತಥಾ। ಉರೌಚವಶ್ಯ ಸಂಭೂತಃ ಪಾದೇ ಶೂದ್ರಸ್ತಥೈವಚ॥ ಇತಿಸರ್ವಂ ಮಾಹಾದೇವಿ ಶರಿರೇ ಜಂಗಮಸ್ಯಚ। ಪ್ರತ್ಯಕ್ಷ ಮಪಿಗೋಪ್ತವ್ಯ ಮುಪದೇಶಂ ವಿನಾವ್ರುಮೆ॥

ಶ್ಲೋಕ: ನಿರಾಕೃತಂ ರಂಜನಂ ಯಸ್ಮಾಯಾ ಮೋಹ ವಿಜೃಂಭಿತಂ। ನಿಜಸ್ವರೂಪ ಸಿದ್ಧೇನ ಸಭವೋದ್ದಿನಿರಂಜನಃ। ಜ್ಞಾನಂತೇತಿ ಶಯಾದ್ಯೇತು ಶಿವಂ ವಿಶ್ವ ಪ್ರಕಾಶಕಂ। ಸ್ವ ಸ್ವರೂಪಿತ ಮಾತೇಹಿಜಂಗಮಃ ಪ್ರಕೀರ್ತಿತಃ॥

ಅಂದರೆ 'ಅಹಂಬ್ರಹ್ಮಾಸ್ಮಿ ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಪ್ರಮಾಣಾನುಸಾರವಾಗಿ ಶಿವಸಾಕ್ಷಾತ್ಕಾರ ಸಿದ್ಧಿಯುಳ್ಳ ಯಾವಾತನು ಮಾಯಾಮೋಹಿತ ಕಲ್ಪಿತವಾದ ಪ್ರಾಪಂಚಿಕ ವಿಷಯವನ್ನು ನಿರಾಕರಿಸುವನೋ ಮತ್ತು ವಿಶ್ವ

ಮೂರ್ತಿಯಾದ ಶಿವನು ತನಗೆ ಅಭಿನ್ನನಾಗಿರುವನೆಂದು ತಿಳಿದಿರುವನೋ ಆ ಮಹಾತ್ಮನೇ ನಿರಂಜನ ಜಂಗಮನೆಂದು ಹೇಳಲ್ಪಡುವನು. ಮತ್ತು 'ಯಜುರ್ವೇದೇ ಜಂಗಮ ಮಹತ್ವಂ'

ಶ್ಲೋಕ: "ದೇವಾನಾಂ ದೇವ್ಯೋತಿಥಿಃ" ಯಜುರಾರಣ್ಯಕೆ। ಈಶ್ವರೋsತಿಥಿರೇವಚ ವಿತಸ್ತವಮು ಪಾಸ್ಮಹೇ ವೀರಾಗಮೇ। ಸರ್ವ ಲೋಕೋಪಕಾರಾಯ ಯೋ ದೇವಃ ಪರಮೇಶ್ವರಃ। ಚರತ್ಯ ತಿಥಿರೂಪೇಣ ನಮಸ್ತೇ ಜಂಗಮಾತ್ಮನೇ॥

ಹೀಗೆ ಜಂಗಮದ ಉತ್ಪತ್ತಿಯಿದ್ದು ನಿಷ್ಕಾರಣವಾಗಿ ಜಂಗಮನ ಉತ್ಪತ್ತಿ ತಿಳಿಯದೆ ಮನಸ್ಸಿಗೆ ತಿಳಿದಂತೆ ಬರೆದರೆ ಗಣಪತಿಯ ಮಾಡಹೋಗಿ ಬುದ್ಧಿಯಿಲ್ಲದವನು ಮಂಗನನ್ನು ಮಾಡಿದಂತೆಯೇ ಸರಿ.

**ಪ್ರಶ್ನೆ:** ಕೆಲವು ಆಧುನಿಕ ವೀರಶೈವ ಗ್ರಂಥಕಾರರು ಆಸ್ತಿಕರಂತೆ ನಟಿಸಿ, ವಂಚಿಸುವವರು "ಗೋಮುಖವ್ಯಾಘ್ರರು" ಬಹಿರಂಗ ಶತ್ರುಗಳಿಗಿಂತ ಘಾತ ಮಾಡುವವರು. ಸಮಾಜವು ಇಂಥವರ ಸುಳುವು ಹಿಡಿದು ಮುಂಜಾಗರೂಕವಾಗಿರುವದೊಳ್ಳೇದು ಎಂದು ಎಚ್ಚರಿಕೆ ಕೊಟ್ಟಿರುತ್ತಾರೆ?

**ಉತ್ತರ:** ಬಲಗಡೆಯ ಎತ್ತಿಗೆ ಹೊಡೆದರೆ ಎಡಗಡೆಯ ಎತ್ತು ಬೆದರುವಂತೆ ನಿಮ್ಮ ನಾಸ್ತಿಕ ಪಂಥದವರ ಎಚ್ಚರಿಕೆಯು ಗುರಸ್ಥಲದ ಮಠದಯ್ಯನವರಿಗೂ ವಿರಕ್ತ ಮಠದ ಸ್ವಾಮಿಗಳಿಗೂ ಅವಶ್ಯವಿದೆ. ಯಾಕಂದರೆ ರೇಣುಕಾದಿ ಪಂಚಾಚಾರ್ಯರೇ ವರ್ಣಾಶ್ರಮಧರ್ಮ ಪ್ರಕಾರ ಶಕ್ತಿವಿಶಿಷ್ಟಾದ್ವೈತ ವೀರಶೈವ ಮತವನ್ನು ಸ್ಥಾಪಿಸಿದ ರೇಣುಕಾದಿ ಪಂಚಗಣಾಧೀಶ್ವರರ ವಂಶಜರೇ ಗುರುಸ್ಥಲದ ಮಠದಯ್ಯನವರೆಂಬ ಆಚಾರ್ಯರಾಗಿರುವರು. ಇವರ ಶಿಷ್ಯ ಸಂತತಿಯವರೇ ಕಾಲಾರಿ, ಕಾಮಾರಿ, ಪುರಾರಿ, ಮಖಾರಿ, ವೇದಾರಿಗಳೆಂಬ ಭವಾರಿ, ಪಂಚಮ ಮೊದಲಾದ ಸಂಜ್ಞೆಗಳುಳ್ಳ ಭಕ್ತಾದಿಗಳಿರುವರೆಂದು ತಾಳೀಕೋಟಿ ಮಲ್ಲಿಕಾರ್ಜುನಪ್ಪನವರು 'ಪಂಚವಕ್ತ್ರ ಗಣೇಶ್ವರ' ಎಂಬ ಗ್ರಂಥದಲ್ಲಿ ಬರೆದಿದ್ದಾರೆ; ನೋಡಿರಿ. ನೀಲಕಂಠ ಶಿವಾಚಾರ್ಯರು ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ರಚಿಸಿರುವ ಈ ಹಿಂದಿನ ಶಾಸ್ತ್ರ ಪದ್ಧತಿ ಪ್ರಕಾರ ನಮ್ಮ ಈಗಿನ ಪಂಡಿತರೂ ಕನ್ನಡ, ಸಂಸ್ಕೃತ ಉಭಯ ಕವಿತಾವಿಶಾರದರೂ ವೀರಶೈವ ಧರ್ಮದ ತತ್ವದ ತಿರುಳನ್ನು ಅರಿತ ಮಹಾನುಭಾವರಾದ ಕಲ್ಲಿನಾಥ ಶಾಸ್ತ್ರಿಗಳು ವ್ಯಾಂಪುರ ಮಹಾತ್ಮನಾದ ಭಕ್ತ ಶ್ರೀ ಶರಣ ಬಸವೇಶ್ವರ ಪುರಾಣವನ್ನೂ ಹುಕ್ಕೇರಿ ಪಂಡಿತ ಸದಾಶಿವ ಶಾಸ್ತ್ರಿಗಳು ಶ್ರೀ ಬಿದರಿ ಕುಮಾರಸ್ವಾಮಿ

ಗಳ ಪುರಾಣವನ್ನೂ ಇರಾಳ ಗೌರೀನಾಥ ಶಾಸ್ತ್ರಿಗಳು ವೀರಶೈವರ ಸ್ವಾತಂತ್ರ್ಯ ಅನಾದಿತ್ವ ಎಂಬ ಗ್ರಂಥವನ್ನೂ ಬಳ್ಳಾರಿ ವೈ. ನಾಗೇಶ ಶಾಸ್ತ್ರಿಗಳು ಫಲಾಹಾರೇಶ್ವರ ಪುರಾಣವನ್ನೂ ಮತ್ತು ಅಷ್ಟಾವರಣ ವಿವೇಕವೆಂಬ ಗ್ರಂಥವನ್ನೂ ಹಿಂದಿನವರು ಬರೆದ ವೀರಶೈವ ಮತ ಧರ್ಮ ಪದ್ಧತಿ ಪ್ರಕಾರ ಪುರಾಣಗಳನ್ನು ಬರೆದಿದ್ದಾರೆ. ಚರಿತ್ರನಾಯಕರು ಹೊಸಬರಾದರೂ ಶಾಸ್ತ್ರಿಗಳು ಪ್ರಾಚೀನ ಆಧಾರ ಪ್ರಮಾಣ ಪ್ರಕಾರ ಬರೆದಿದ್ದರೂ "ಜಗ ಅಲ್ಲಾಡಿಸುವವರ ಮುಂದೆ ತಿಗ ಅಲ್ಲಾಡಿಸಿದರೆಂಬ" ಗಾದೆಯಂತೆ ಮಠದಯ್ಯನವರೇ ತಮ್ಮ ಮನಸ್ಸಿಗೆ ಬಂದ ಹಾಗೆ ಪುರಾಣಗಳನ್ನು ಬರೆದಿರುವರೆಂದು ಉದ್ಗಾರ ಹೊರಡಿಸಿ, ಇವರು ಪುರಾಣಗಳನ್ನು ತಿದ್ದಿ ತಾವು ಗುರುಜಂಗಮರಾಗಬೇಕೆಂಬ ಹಪಾಹಪಿಯಿಂದ ಅನುಕೂಲ ಗ್ರಂಥಗಳನ್ನು ತಯಾರ ಮಾಡಬೇಕೆಂದು ನೀವೂ ಹಾಗೂ ನಿಮ್ಮ ಶರಣ ಸೇವಾ ಸಂಘದವರೂ ಪ್ರಾಚೀನ ಗುರುಸ್ಥಲದಯ್ಯನವರ ಕೊಲೆಗೈಯುವ ಶ್ರದ್ಧಾಹೀನರಾದ ಧರ್ಮನಾಶಕರು ಸಮಾಜದಲ್ಲಿ ಹೆಚ್ಚುತ್ತ ಸಂಪೂರ್ಣ ವೀರಶೈವ ಮತದ ಜ್ಞಾನವಿಲ್ಲದೆ, ಖೊಟ್ಟಿ ಗ್ರಂಥವನ್ನು ಬರೆಯುತ್ತ ಹೋದರೆ ಹಿಂದಿನ ಪುರಾತನ ಸದ್ಭಕ್ತರು ಯಾವ ಮಾರ್ಗದಿಂದ ನಡೆದರೋ ಅದೇ ಮಾರ್ಗವನ್ನು ಬಿಟ್ಟು, ನೀವು ಸನಾತನ ಭಕ್ತಿ ವಿರೋಧಕಾರ್ಯವನ್ನು ಆಚರಿಸುತ್ತ ನಿರ್ಮೋಹಿಗಳಾದ ಅಯ್ಯನವರ ಸಂತತಿಗೆ ಶಾಶ್ವತ ಕಲಂಕ ಹಚ್ಚಿ "ಮಂತ್ರವಾದಿ" ಎಂಬ ಪುಸ್ತಕ ಬರೆದು ಮತ್ಸರ್ಯಕ್ಕೆ ಸಹಾಯಮಾಡುತ್ತ ವೀರಶೈವ ಮತವು ಇವರ ಬರಹದಿಂದ ಐಕ್ಯದಿಂದ ನಡೆದುಬಂದದ್ದು ಕೆಟ್ಟುಹೋಗುವದೇ ಹೊರತು, ಒಂದಿಷ್ಟು ಸಮಾಜಕ್ಕೆ ಲಾಭವಿಲ್ಲ, ಸಾರ್ಥಕವಿಲ್ಲ. ಮಂತ್ರವಾದಿಯು ಅನ್ಯಾಯ, ಅನೃತ, ಮೋಸ, ಗುರುಸ್ಥಲದ ಮಠದಯ್ಯನವರ ಭಕ್ತರ ಜಗಳ ಮುಂತಾದ್ದಕ್ಕೆ ಮಾರ್ಗವಾಗಿದೆ. ಸುಳ್ಳಿನ ಬೀಜ, ಅಬದ್ಧನುಡಿ, ಕುತರ್ಕ, ಕುಮತ, ಆರಾಧನೆ ಮೊದಲಾದ ಸಂಬಾರ ಅಂಗಡಿಯಾಗಿದೆ; ಮಂತ್ರವಾದಿ ಧರ್ಮಶಾಸ್ತ್ರ ಹೋಗಿ ಕರ್ಮ ಶಾಸ್ತ್ರವಾಗಿದೆ ?

ವಚನ: ಕೋತಿಗೆ ಕೊಂಬು ಹುಟ್ಟಬಲ್ಲದೆ । ಮುಜ್ಜಕ್ಕಿ ಮೊಳೆಯಬಲ್ಲದೆ । ಸತ್ತ
ಮರ ಎಳಕಬಲ್ಲದೆ । ಅರೆಯ ಮೇಲೆ ತಾವರೆ ಬೆಳೆಯಬಲ್ಲದೆ ಅಯ್ಯಾ !
ದುರ್ಬುದ್ಧಿ ಮಾನವರ ಭಾವದಲ್ಲಿ ಶಿವಜ್ಞಾನವಿಲ್ಲದವಂಗೆ ಶಿವಕೃಪೆ
ಎಲ್ಲಿಯದೋ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ ॥

ಎಂಬಂತೆ ನಿಮ್ಮಂಥವರ ಗ್ರಂಥವನ್ನು ನೋಡಿ ವೀರಶೈವ ಧರ್ಮದವರು ವರ್ಣಸಂಕರರು, ಜಾತಿಸಂಕರರೆಂದು ಅನ್ಯಮತೀಯರು ನಮ್ಮನ್ನು ಶೂದ್ರ ವರ್ಗದಲ್ಲಿಟ್ಟು ಪೀಡಿಸಲಿಕ್ಕೆ ಹತ್ತಿದ್ದು ಬನವಾಸಿ ಮತ್ತು ಪರಳಿ ದೇವಾಲಯಗಳ ಪ್ರಕರಣಗಳೇ ಸಾಕ್ಷಿ. ಇಂಥ ಶರಣ ಸೇವಾ ಸಂಘದ ಮಾತ್ರವಾದಿ ಗ್ರಂಥಕ್ಕೆ ಬೆಲೆಕೊಡದೆ ಸನಾತನ ವೀರಶೈವ ಧರ್ಮದ ಪ್ರಕಾರ ಮೇಲೆ ಬರೆದ ಪಂಡಿತ ಸಮೂಹವು ರಚಿಸಿದ ಕರ್ಮಸ್ಥಲ, ಜ್ಞಾನಸ್ಥಲದಿಂದೊಡಗೂಡಿದ ಸರ್ವಾಂಗ ಸುಂದರವಾದ ಪುರಾಣ ಶ್ರೇಷ್ಠ ಗ್ರಂಥಗಳಾಗಿವೆ. ಇವುಗಳನ್ನು ತಿದ್ದಬೇಕೆಂಬ ನಿಮ್ಮ ಅಭಿಪ್ರಾಯವು ಮೂರ್ಖತನದ್ದೇ ಸರಿ.

**ಪ್ರಶ್ನೆ:** ಇಷ್ಟಲಿಂಗವನ್ನು, ಪತಿಯನ್ನು ಒಂದೇ ಎಂದು ಫಲಾಹಾರೇಶನ ತಾಯಿಯು ಭಾವಿಸಿದ್ದಳೆಂದು ಹೇಳಲಾಗಿದೆ. ಆದರೆ ಆ ಪತಿಯು ಮೃತನಾದರೆ ಗತಿಯೇನು? ಈ ಸಾವು ಕೆಡುವ ಗಂಡರ ನೊಯ್ದು ಒಲೆಯೊಳಗಿಕ್ಕು ಎಂದು ಮಹಾದೇವಕ್ಕನು ಹೇಳಿಲ್ಲವೇ? . ಪತಿಯು ಲಿಂಗಬಾಹಿರನಾದರೆ ಅಭಕ್ಷ್ಯ ಭಕ್ಷಣಮಾಡಿದರೆ ಸದಾ ಭವಿಸಂಪರ್ಕವುಳ್ಳವನಾದರೆ ಆಗ ಪತ್ನಿಯು ತನ್ನಿಷ್ಟಲಿಂಗದಂತೆ ಪತಿಯನ್ನು ಕಾಣುವದು ವಿವೇಕ ಸಮ್ಮತವೇ?

**ಉತ್ತರ:** ಶರಣ ಸತಿ, ಲಿಂಗಪತಿ ಭಾವಮಂ ಬಾಹ್ಯಮಾತ್ರದಿಂ ನುಡಿದು ಭಿನ್ನ ಭಾವಿಗಳಾಗಿರ್ಪರನ್ನು ಶ್ರೀ ಮಗ್ಗೀ ಮಾಯಿದೇವರು ಹೀಗೆ ಅಂದಿರುವರು ನೋಡಿರಿ? ಶತಕತ್ರಯ ಪ. (೬೯): "ಸತಿಶರಣಂ ತದೀಯ ಪತಿಲಿಂಗ ಮೆನುತ್ತಿಹ ಲಿಂಗಭಕ್ತರಾ। ಸತಿಪತಿ ಧರ್ಮಮಂ ತಿಳಿದು ನೋಡದೆ ದೂರದ ಪಾಪಭಾವದಿಂ" ಎಂದು ಹೇಳಿದ ಶಾಸ್ತ್ರಪದ್ಧತಿ ಪ್ರಕಾರ ಆ ತಾಯಿಯು ಸೃಷ್ಟಿ ನೇಮಕ್ಕನುಸರಿಸಿ, ಗಂಡನು ಮೃತಪಟ್ಟರೆ ಶಾಸ್ತ್ರ ಪದ್ಧತಿಪ್ರಕಾರ ಫಲಾಹಾರೇಶನ ತಾಯಿ ಸತಿಪತಿ ಧರ್ಮ ವಿಚಾರದಿಂದ ನಡೆದದ್ದನ್ನು ಶಾಸ್ತ್ರಸಿದ್ಧವೆಂದು ತಿಳಿ. ವೈರಾಗ್ಯ ಶೀಲಳಾದ ಮಹಾದೇವಕ್ಕನು ತೂರ್ಯಾವಸ್ಥೆಯಲ್ಲಿ "ಸಾವು ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ನುಡಿದ ಮಾತ್ರಕ್ಕೆ ಆಕೆಯು ಸ್ಥಿರ ಜೀವಿಯಾಗಿ ಸ್ಥಿರ ಜೀವಿಯಾದ ಗಂಡನನ್ನು ಮಾಡಿಕೊಂಡು ಬದುಕಿದ್ದರೆ ಆದರ್ಶ ಜೀವಿ ಎನಿಸಿಕೊಳ್ಳುತ್ತಿದ್ದಳು.

ಇನ್ನುಮೇಲೆ, ನನಗೆ ಎಂಟು ಮಕ್ಕಳಿವೆಯೆಂದು ಬರೆದಿರುವಿರಿ. ಅದರಲ್ಲಿ ಹೆಣ್ಣುಮಕ್ಕಳೂ ಕೂಡಾ ಇರಬಹುದು. ಅವರನ್ನು ನೀವು ಸಾಯದೆ ಇದ್ದ

ಗಂಡರಿಗೇನೇ ಕೊಡಬಹುದಲ್ಲವೇ? ಅಭಕ್ಷ್ಯ ಭಕ್ಷಣ ಮಾಡಿದರೆ, ಭವಿಸಂಪರ್ಕ ಮಾಡಿದರೆ ಎಂಬ ನಿಮ್ಮ ಪ್ರಶ್ನೆಯು ಕುಲಗೇಡಿಗಳ ಸಲುವಾಗಿ ಹೇಳಿದಂತಾಯಿತು. ಅಂಥವರ ಸಲುವಾಗಿ ಶಾಸ್ತ್ರಗಳು ಪ್ರಾಯಶ್ಚಿತ್ತವನ್ನು ಬೇರೆ ಹೇಳುತ್ತವೆ. ಇವನ್ನೆಲ್ಲ ಬಿಟ್ಟು ಮೂರ್ಖ ಮರಾಲೋಚನೆ ಮಾಡುತ್ತ ಗ್ರಂಥದಲ್ಲಿ ಬರೆದ ಮಾತ್ರಕ್ಕೆ ಜ್ಞಾನಿಗಳು ಒಪ್ಪುವರೇ? ಶ್ರೀ ಬಸವೇಶ್ವರನು ಕಪ್ಪಡೀ ಸಂಗಮನಾಥನಲ್ಲಿ ಬೆರೆದರೆಂಬ ವಾರ್ತೆ ಹಡಪದ ಹಂಪಣ್ಣನವರ ಮುಖಾಂತರ ತಿಳಿದು ನೀಲಾಂಬಿಕೆಯು ತನ್ನಿಷ್ಟಲಿಂಗದಲ್ಲಿ ಬೈಲಾದಳೆಂಬುವವನ್ನು ನೀವು ಅರಿತಂತೆ ಕಾಣುವದಿಲ್ಲ. ಈ ಮಾತು ಸುಳ್ಳೇ. ಹೀಗೆ ವಿವೇಕ ಸಮ್ಮತವಾದ ಮಾರ್ಗವನ್ನು ತ್ಯಜಿಸಿ ನಾವಕೆಡುವ ಗ್ರಂಥವನ್ನು ಒಲೆಯೊಳಗಿಕ್ಕೊಂದು ಉಬ್ಬುಬ್ಬಿ ಪುಟಿಪುಟಿದು ಬರೆದಿರುವಿರಿ. ವೇದಸಾರ ಕಲ್ಪಾಂತರ ಪ್ರಳಯದಲ್ಲಿ ಹೀಗೆ ಅದೆ ನೋಡಿರಿ.

ಶ್ಲೋಕ: ಚತುರ್ಯುಗ ಸಹಸ್ರಾಷ್ಯ ಮಹೋರಾತ್ರ ಭವಿಷ್ಯತಿ। ಏವಂ ಬ್ರಹ್ಮ ಜಗತ್ಕರ್ತಾ ಶತವರ್ಷಾಣಿ ಜೀವಿತಂ॥ ಬ್ರಹ್ಮಣಾ ಜೀವವಿಕ್ರಾಂತಿ ತಸ್ಯ ವಿಷ್ಣೋರ್ಭವೇದ್ದಿನಂ। ಸ ವಿಷ್ಣುರೇವ ತ್ರಿವಿಧಂ ಶತವರ್ಷಾಣಿ ಜೀವಿತಂ॥ ವಿಷ್ಣೋರಬ್ದ ಶತೇನೈವ ರುದ್ರಸ್ಯ ದಿವಸೋ ಭವೇತ್। ಏವಂವಿಧೋ ಮಹಾದೇವೋ ಶತವರ್ಷಾಣಿ ಜೀವಿತಂ॥

ಹೀಗೆ ಬ್ರಹ್ಮನ ದಿನಸಂಖ್ಯೆಯ ಪ್ರಮಾಣದಿಂದ ನೂರು ವರ್ಷವಾಗಲು ಬ್ರಹ್ಮನು ಸುಖಸ್ಥಾನವನ್ನು ಹೊಂದುವನು; ಅಂದರೆ ಬ್ರಹ್ಮನಿಗೆ ಮರಣವಾಗುವದು. ವಿಷ್ಣುವಿಗೆ ಅವನ ಮಾನದಿಂದ ನೂರು ವರ್ಷವಾಗಲು ಮರಣ ಹೊಂದುವನು. ಇವರಂತೆ ಶಿವನೂ ಕೂಡಾ ಮರಣಹೊಂದಿ ಜಗತ್ಪ್ರಳಯವಾಗುವದೆಂದು ಶಾಸ್ತ್ರಗಳು ಘಂಟಾಘೋಷವಾಗಿ ಸಾರುತ್ತಿದ್ದರೂ ಮರಣರಹಿತ ಗಂಡನನ್ನು ತರಲು ಶಕ್ಯವೇ? "ಮಹದ್ವೈಪುರೇಶ್ವರ ಶತಕ" ೭೦ನೇ ಪದ್ಯ:

ಪದ್ಯ: ಭವಹರ ನಿನ್ನ ಕಣ್ಣೆವೆಗಳಾಟದಿ ಸಬ್ಜಭವಾದಿಗಳ್ಗೆ ಸಂ। ಭವಿಸುವುದು
ದ್ಭವಂ। ಮರಣ ಮುಂದನಲಿನ್ನು ಮನುಷ್ಯ ಕೀಟಜ॥ ನ್ಮರನಿರಿದೆಯ್ದಿ
ಬಾಳವರ ನಿತ್ಯತೆಯೇ ನಿದರೊಳ್ ಕೃಪಾಪ್ರಸಾ। ದವನಿರದಿತ್ತು ಕಾಯಿ
ಪರಮ ಪ್ರಭುವೇ ಮಹದೈಪುರೇಶ್ವರಾ॥

ಟಿಪ್ಪಣಿ: ಎಲೈ ಸ್ವಾಮಿಯೇ ನೀನು ಕಣ್ಣು ರೆಪ್ಪೆಯನ್ನು ಮುಚ್ಚುವಷ್ಟರೊಳಗೆ ಬ್ರಹ್ಮ-ವಿಷ್ಣು ಮೊದಲಾದ ದೇವತೆಗಳಿಗೆ ಜನನ ಮರಣಗಳು ಸಂಭವಿಸಿ

ಹೋಗುವವೆಂದು ಹೇಳಲ್ಪಡುತ್ತಿರಲಾಗಿ ಇನ್ನು ಮಾನವ ಜನ್ಮವೆಂಬ ಸಣ್ಣ ಹುಳುವಿನ ಜನ್ಮವನ್ನು ಹೊಂದಿ ಬಾಳುತ್ತಿರುವವರ ಸ್ಥಿರತೆಯನ್ನು ಹೇಳುವ ದೇನು ನಿಮ್ಮ ದಡ್ಡತನವಲ್ಲವೇ ?

ಇಂಥ ಅರ್ಥವಾದದ ದೃಷ್ಟಾಂತದಿಂದ ಬರೆದಿರುವ ನಿನ್ನ ಮಂತ್ರವಾದಿ ಗ್ರಂಥವು ಬಿರುಗಾಳಿಯಲ್ಲಿ ಇಟ್ಟ ಹಣತಿ ದೀಪಿಗೆಯಂತೆಯೇ ಸರಿ

**ಪ್ರಶ್ನೆ:** ಜನ್ಮತಃ ಮೇಲು-ಕೀಳುಗಳಿಲ್ಲವೆಂದು ಸೂಜ್ಞರು ಒಪ್ಪುವರು. ವರ್ಣಾಶ್ರಮ ಪಕ್ಷಪಾತಿಗಳಿಲ್ಲ ಒಂದೇ. ಅಲ್ಪ ಸಂಖ್ಯಾಕ ವರ್ಗದವರಾದ ಅಯ್ಯನವರೇ ಇರುವ ಕಾರಣವೇನು ? ಇದು ಭಕ್ತಿಪ್ರಧಾನ ವೀರಶೈವರನ್ನು ಅಹಂಕಾರ ಪ್ರಧಾನರಾಗಿ ಮಾಡುವದಾಗಿದೆ. ದಾಸೋಹಂಭಾವಕ್ಕೆ ಕಂಟಕ ವಾಗಿದೆ.

**ಉತ್ತರ:** ಜನ್ಮತಃ ಮೇಲು-ಕೀಳು ಇಲ್ಲದಿದ್ದರೆ ಗುರುಜಂಗಮುಕ್ಕಷ್ಟೇ ಪೂಜ್ಯವಸ್ತುವೆಂದು ಮಹತ್ವಕೊಡುತ್ತಿದ್ದಿಲ್ಲ.

**ಶ್ಲೋಕ:** ಮಮಪಂಚ ಮುಖೋದ್ಭೂತಾ ಸ್ಸಂಸ್ಥಾಪ್ಯ ಕಲಸಾನ್‌ಭುವಿ | ದೀಕ್ಷಾಕೃತ್ವಾ ಮಹಾದೇವಿ ಪಂಚವರ್ಣಾನಾಂ ನಗಾತ್ಮಜೆ॥ ಕಲೌತದ್ವಂಶ ಜಾತಾನಾಂ ದೀಕ್ಷಾನುಗ್ರಹ ಕಾರಣಾತ್ | ಸ್ಥಾಯೀ ನಿಜ ಶಿಷ್ಯಾಂಶ್ಚಪುನಸ್ತೇ ಮಾಂ ಸಮಾಗತಾಃ ॥

' ಸ್ವಯಂಭೂ ಆಗಮದಲ್ಲಿ ': (೧) ವೀರಮಾಹೇಶ್ವರ ಪ್ರಕರಣಂ (೨) ವೀರಶೈವ ಲಿಂಗಿ ಬ್ರಾಹ್ಮಣ ವಂಶಾವಳಿ ಪಟ.

**ಶ್ಲೋಕ:** ತ್ರಿವಿದಂ ವೀರಶೈವಾಖ್ಯ ಮಧಿಕಾರಿ ವಿಭೇದತಃ | ಕೃತಂ ಮಯಾ ಪುರಾದೇವಿ ಭಕ್ತೋದ್ಧರಣ ಹೇತವೆ | ಸಾಮಾನ್ಯ ವೀರಶೈವಂಚ ವಿಶೇಷಂಚ ತತಃ ಪರಂ | ನಿರಾಭಾರಂ ವೀರಶೈವಂ ನತತೋಧಿಕ ಮೀಶ್ವರೀ ॥

ಅಂದರೆ ಹೇ ದೇವಿಯೇ ಭಕ್ತೋದ್ಧಾರಣಕ್ಕಾಗಿ ಪೂರ್ವದಲ್ಲಿ ನನ್ನಿಂದ ವೀರಶೈವ ಮತದಲ್ಲಿ ಸಾಮಾನ್ಯ ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವವೆಂದು ತ್ರಿವಿಧ ಭೇದ ಮಾಡಲ್ಪಟ್ಟಿದೆ. ಇದರಲ್ಲಿ ಸಾಮಾನ್ಯ ವೀರ ಶೈವಕ್ಕಿಂತಲೂ ವಿಶೇಷ ವೀರಶೈವರಧಿಕ, ವಿಶೇಷ ವೀರಶೈವಕ್ಕಿಂತಲೂ ನಿರಾಭಾರಿ ವೀರಶೈವರಧಿಕವೆಂದು ಶಾಸ್ತ್ರ ಸಾರುತ್ತಿದ್ದು, ವೀರಶೈವರಲ್ಲಿ ಮೇಲು-ಕೀಳು ಇಲ್ಲ ವೆಂಬುದು ನಿನ್ನ ಭ್ರಮೆಯಲ್ಲದೆ ಮತ್ತೇನು ?

ಮತಸ್ಥಾಪನಾಚಾರ್ಯರು ಗುರುಲಿಂಗ ಜಂಗಮದ ಸದ್ವಂಶವು ಈ ಭೂಲೋಕದಲ್ಲಿರಿಸಿ ತಮ್ಮ ವಂಶಕರಿಗೆ ವೈದಿಕ ಧರ್ಮ ಗುರುಗಳೆಂದು ಹೆಸರಿಟ್ಟು, ಬಾಕಿ ಜನಕ್ಕೆ ಭಕ್ತಾದಿಗಳೆಂದು ನಾಮಕರಣ ಮಾಡಿದ್ದರಿಂದ ಬಸವಾದಿ ಪ್ರಮಥರು ಭಕ್ತಿವಹಿಸಿ, ಅದೇ ಗುರುಜಂಗಮಕ್ಕೆ ಮಹತ್ವಕೊಟ್ಟು, ಅವರಲ್ಲಿ ಭಕ್ತಿಯನ್ನಿಟ್ಟು ಆಚರಿಸಿ ನಡೆದರೆಂಬುದು ಬಸವಾದಿ ಪ್ರಮಥರ ಚರಿತ್ರದಿಂದಲೇ ತಿಳಿದು ಬರುತ್ತದೆ. ಅಂದಮೇಲೆ ಜನ್ಮತಃ ಮೇಲು-ಕೀಳುಗಳಿಲ್ಲವೆಂಬುದು ನಿಮ್ಮ ಭ್ರಮೆಯಲ್ಲದೆ ಮತ್ತೇನು? " ಉಮ್ಮರುಟು ಮಾತಾಡಿ, ಇದ್ದವನು ಹೋಗಾಡಿ ಉದ್ಯಾನಮರದ ತುದಿಗೇರಿ ತಲೆಯೂರಿ ಬಿದ್ದ ಸತ್ತಂತೆ ಸರ್ವಜ್ಞ " ಎಂಬಂತೆ ನೀವು ಗುರುಕುಲದ ಜಂಗಮರನ್ನು ಸಂಪೂರ್ಣ ನಾಶಮಾಡಿ ಅವರು ಭಕ್ತ ಕುಲದವರೆಂದು ದ್ವೇಷಿಸುವ ನಿಮ್ಮ ಮಹಾತ್ಮಾಕಾಂಕ್ಷೆಯು ವುಟಿವುಟಿದು ಹೊರಹೊಮ್ಮುತ್ತಿದೆ. ಏನೋ ಒಂದು ಪುಣ್ಯ ವಿಶೇಷದಿಂದ ಮನುಷ್ಯ ಜನ್ಮವನ್ನು ತಾಳಿ ವರ್ಣಾಶ್ರಮ ಕುಲಗಳ ತಾರತಮ್ಯ ತಿಳಿಯದೆ, ಮರಗಮ್ಮನ ಪೂಜಾರಿಯಂತೆ ಗಳಗಳ ಗಂಟೆಯನ್ನುಗಲಾಡಿಸಿ, ದಾಸಯ್ಯನಂತೆ ಜಾಗಟೆಯನ್ನು ಬಾರಿಸಿದಂತೆ, ನಿಮ್ಮ ಮಂತ್ರವಾದಿ ಗ್ರಂಥ ಪೋಳಿಯಲ್ಲಿ ಹುಣಸೇ ಹಣ್ಣು ತೊಳೆದಂತೆ ವ್ಯರ್ಥವೇ ಸರಿ. " ಸತ್ಯಂವದ ಧರ್ಮಂಚರ " ಎಂದು ಮಹಾತ್ಮರು ಬೋಧಿಸುತ್ತಿದ್ದರೂ ದುರ್ಗುಣಗಳ ಸಂಸರ್ಗದಿಂದ ಸನಾತನ ವರ್ಣಾಶ್ರಮ ಧರ್ಮವನ್ನು ಅತಿಕ್ರಮಿಸಿದ ಅ. ಮ. ಪಾಟೀಲರೇ,

ಶ್ಲೋಕ: ಆದೌ ವರ್ಣಾಶ್ರಮಾಚರೇ ಗುರೌಬ್ರಹ್ಮಜ್ಞ ತಾಸ್ತಿಚೇತ್ ।
ಭಜೆತ್ತಮೇವ ಯತ್ನೇನ ನಚೇದನ್ಯ ಗುರುಂ ವ್ರಜೇತ್ ॥

ಅಂದರೆ ಮೊದಲು ಗುರುವಿನಲ್ಲಿ ವರ್ಣಾಶ್ರಮಾಚಾರ ಧರ್ಮವೂ ಬ್ರಹ್ಮಜ್ಞಾನವೂ ಇದ್ದರೆ ಆ ಗುರುವನ್ನೇ ಪ್ರಯತ್ನ ಪೂರ್ವಕ ಸೇವಿಸಬೇಕು. ಅತನಲ್ಲಿ ವರ್ಣಾಶ್ರಮ ಧರ್ಮಗಳಿಲ್ಲದಿದ್ದರೆ ಮತ್ತೊಬ್ಬ ಗುರುವನ್ನು ಹೊಂದಬೇಕೆಂದಿರುವದು. ಸಾಧ್ಯ ರೀತಿಯಿಂದ ಸಹಜ ವೀರಶೈವನಾದಾತನಿಗೆ ವರ್ಣಾಶ್ರಮ ಧರ್ಮಗಳ ವಿಷಯದಲ್ಲಿ ಸ್ವಭಾವ ಸಿದ್ಧವಾದ ನಿರಾಭಿಮಾನವುಂಟಾಗಿ, ಅತ್ಯಾಶ್ರಮಿ ಎನಿಸಿಕೊಳ್ಳುವನಾದ ಕಾರಣ ಆಶ್ರಮ ಧರ್ಮವನ್ನು ಕೈವಲ್ಯೋಪನಿಷತ್, ಬ್ರಹ್ಮೋಪನಿಷತ್ ಮೊದಲಾದವುಗಳಲ್ಲಿ ಹೇಳಲ್ಪಟ್ಟ ಪ್ರಕಾರ, ನಿಜಗುಣ ಶಿವಯೋಗಿಗಳ ವಿವೇಕಚಿಂತಾಮಣಿ ಹೇಳಿರುವದನ್ನು ಇಲ್ಲಿ ನೋಡಿರಿ.

ಶ್ಲೋಕ: ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂರಾಜನ್ಯಃ ಕೃತಃ । ಊರೂತದಸ್ಯೈಶ್ಯಃ ಪದ್ಭ್ಯಾಂ ಶೂದ್ರೋ ಜಾಯತ ॥ ಉಕ್ತಾ ವರ್ಣಾಶ್ರಮಾಚಾರಃ ಪ್ರಾಕೃತಾಃ ಸ್ಮೃತಿ ಸಮ್ಮತಾಃ । ಬ್ರಹ್ಮಚಾರೀ ಗೃಹಸ್ಥಶ್ಚವಾನ ಪ್ರಸ್ಥಶ್ಚ ಭಿಕ್ಷುಕಃ ॥

ಇತ್ಯಾದಿ ಆಗಮ ವಚನಗಳಿಂದ ವರ್ಣಾಶ್ರಮ ವಿಭಾಗವು ಮಾಡಲ್ಪಟ್ಟಿರುವದರಿಂದಲೂ ಸ್ಮೃತಿ–ಪುರಾಣ–ಇತಿಹಾಸಗಳಲ್ಲಿ ವರ್ಣ ವಿಭಾಗ, ಆಶ್ರಮ ವಿಭಾಗ ಆಯಾ ವರ್ಣಾಚಾರ, ಆಶ್ರಮಾಚಾರ ಮುಂತಾದವುಗಳು ಘಂಟಾ ಘೋಷವಾಗಿ ಸಾರುತ್ತಿದ್ದು,

ಶ್ಲೋಕ: ಶಿವೋಕ್ತಾಂ ಜಾತಿ ಮರ್ಯಾದಾಂ ಯೋತೀತ್ಯ ಭುವಿವರ್ತತೆ ।
ಸಪಾಷಾಂಡ ಇತಿಜ್ಞೇಯಃ ಸರ್ವಕರ್ಮ ಬಹಿಷ್ಕೃತಃ ಭ್ರಷ್ಟೋಯಃ ।
ಸ್ವಾಶ್ರಮಾಚಾರಾತ್ಪತಿ ತಸ್ತೋ ಜಿಡಿಯತೇ ॥

ಇತ್ಯಾದಿ ಪ್ರಮಾಣ ವಚನಗಳಿಂದ ವರ್ಣಾಶ್ರಮ ಭ್ರಷ್ಟರನ್ನು ನಿಂದಿಸಿ ಹಳಿದದ್ದರಿಂದ,

ಶ್ಲೋಕ: ಸಂಕರಾಸ್ಸರ್ವ ದೇವಾಶ್ಚ ವೃಕ್ಷಲಸ್ತು ಪುರಂದರಃ ।
ಪಿತಾಮಹಸ್ತು ವೈಶ್ಯಸ್ಸ್ಯಾತ್ ಕ್ಷತ್ರಿಯಃ ।
ಪರಮೋಹರಿಃ ಬ್ರಾಹ್ಮಣೋ ಭಗವಾನ್ ರುದ್ರಃ ಸರ್ವೇಷಾ ಮುತ್ತಮಃ ॥

ಎಂಬೀ ವಚನದಿಂದ ದೇವತೆಗಳನ್ನು ವರ್ಣಾಶ್ರಮ ಧರ್ಮಗಳಿಂದ ವಿಭಾಗಿಸಿರುವದರಿಂದ ವೀರಶೈವರಲ್ಲಿ ವರ್ಣಾಶ್ರಮ ಧರ್ಮವಿಲ್ಲವೆಂಬುದು ತಿ. ಮ. ಪಾಟೀಲರ ಭ್ರಮೆಯಲ್ಲದೆ ಮತ್ತೇನು ?

ಪಾಟೀಲರೆ, ನಿಜಗುಣರ 'ವಿವೇಕ ಚಿಂತಾಮಣಿ'ಯಲ್ಲಿ ಆಶ್ರಮ ವಿಭಾಗವನ್ನು ಹೇಳಿರುವದು ನೋಡಿರಿ. "ಸೂರ್ಯೋದಯಕ್ಕೆ ಮೊದಲೆದ್ದು ನೋಳ್ಪಲ್ಲಿ ಇದು ಖದ್ಯೋತ, ಇದು ದೀಪ, ಇದು ನಕ್ಷತ್ರ, ಇದು ಚಂದ್ರನೆಂದು ಇಂತು ಬೇರೆ ಬೇರೆ ಲಕ್ಷಿಸಿಕೊಳ್ಳುತ್ತಿದ್ದ ಪ್ರಕಾಶಾಂತರಗಳುಂ ಸೂರ್ಯೋದಯ ಮಾಗಲೊಡನೇ ತಾವು ಆ ಸೂರ್ಯ ಜ್ಯೋತಿರ್ದೀಪ್ತಿಯೋಳ್ ಅಂತರ್ಭಾವಮಂಗೊಂಡಂತೆ ಜ್ಞಾನೋತ್ಪತ್ತಿಗೆ ಮುನ್ನವೇ ಭಿನ್ನ ಭಿನ್ನವಾಗಿ ಅಭಿಮಾನಿಸಿಕೊಳ್ಳಲು ಯೋಗ್ಯಮಾಗಿರ್ದ ಚತುರಾಶ್ರಮ ಧರ್ಮಂಗಳಿಂದಂತಃಕರಣ ಶುದ್ಧನಾಗಿ ಮೇಲೆ ಸಾಧನ ಚತುಷ್ಟಯ ಸಂಪನ್ನನಾಗಿ ಬಳಿಕ ಶ್ರೀ ಗುರೂಪದೇಶ ಪ್ರಭಾವದಿಂ ವೇದಾಂತ, ಸಿದ್ಧಾಂತ ಮಾದ ಜೀವ ಪರಮೈಕ್ಯ ವಿಷಯ ಮಪ್ಪ

ಜ್ಞಾನದಿಂದ, ನಿರ್ವಿಕಲ್ಪ ನಿರ್ವಿಶೇಷ, ಚಿನ್ಮಾತ್ರ ನಿತ್ಯ ಶುದ್ಧಾ ಸಂದ್ವೈಕ, ರಸಾ ದ್ವೈತ ಸಿದ್ಧಾಂತಿಯಾಗಿ ಮುಕ್ತಜ್ಞಾನಾಂತರವೊಳಾ ಜ್ಞಾನಕ್ಕೆ ಜೀರೊಂದತಿ ಶಯ ಮಿಲ್ಲವಾಗಿ ತನಗೊಂದಾಶ್ರಮದಭಿಮಾನವಿಲ್ಲದೇ ವಿಧಿನಿಷೇಧಾತೀತ ನಾಗಿ ನಿಸ್ತ್ರೈಗುಣ್ಯಪದವಂ ಪೊಕ್ಕು ಸರ್ವಾಶ್ರಮಗಳಿಂ ಪೂಜ್ಯನಾಗಿ ಜೀವ ನ್ಮುಕ್ತನೆಂದೂ ಸ್ಥಿತಿಪ್ರಜ್ಞನೆಂದೂ ಗುಣಾತೀತನೆಂದೂ ನಿರ್ಲಿಪ್ತನೆಂದೂ ಜ್ಞಾನ ಸಿದ್ಧನೆಂದೂ ಅವಧೂತನೆಂದೂ ಕೃತಕೃತ್ಯನೆಂದೂ ಭಗವದ್ಭಕ್ತನೆಂದೂ ಬ್ರಾಹ್ಮಣನೆಂದೂ ಶಿವಯೋಗ ಸಿದ್ಧನೆಂದೂ ಪೆಸರ್ವಡೆದಿರ್ಪಾತನೇ ಕೈವಲ್ಯ ಪರಮಹಂಸ, ನಿರಾಲಂಬ, ಬ್ರಹ್ಮವಿದ್ಯಾಪ, ನಿಷದ್ಯುಕ್ತ ಪ್ರಕಾರಮಾಗಿ ಅತ್ಯಾ ಶ್ರಮೀಯಪ್ಪಂ ||

ವೀರಶೈವಾಚಾರ ಕೌಸ್ತುಭದಲ್ಲಿ: "ವಂಶ್ಯ ಆಗಂತುಕ ಶ್ಚೇತಿ ದ್ವಿವಿಧಃ ಶಿಷ್ಯ ಈರ್ಯತೇ" ಗುರುಪ್ರಸನ್ನತೆಯ ಪಡೆದ ವೀರಶೈವ ಶಿಷ್ಯನು ಎರಡು ತೆರ ನಾಗಿರುವನು. ಒಬ್ಬನು ವಂಶ ಸಂಭೂತನು, ಮತ್ತೊಬ್ಬನು ಆವದಾದ ರೊಂದು ಜನಾಂಗದಿಂದ ಬಂದವನೆಂದು ಹೇಳಲ್ಪಟ್ಟಿದೆ.

ಹೀಗೆ ವರ್ಣಾಶ್ರಮ ಧರ್ಮಗಳಿಂದಲೂ ಅತಿವರ್ಣಾಶ್ರಮಿಗಳಿಂದಲೂ ವೀರಶೈವರಲ್ಲಿ ಹೀಗೆ ಭೇದವಿದ್ದದ್ದನ್ನನುಕರಿಸಿ ವೇದಾಗಮ ಪುರಾಣಗಳಲ್ಲಿ ಪಂಚಾಚಾರ್ಯರಿಂದ ಸ್ಥಾಪಿಸಲ್ಪಟ್ಟ, ವೀರಶೈವರಾದ್ದರಿಂದ ಅಂಥ ಪಂಚಾ ಚಾರ್ಯ ವಂಶಜರಾದ ಗುರುಸ್ಥಲದ ಮಠದಯ್ಯನವರು ಅಷ್ಟಾವರ್ಣ ಮುಖ್ಯ ಗುರುಗಳಾದ್ದರಿಂದ ಇವರ ತೀರ್ಥ ಪ್ರಸಾದಗಳಿಂದ ಪೋಷಿಸಲ್ಪಡುತ್ತಿರುವರಾಗಿ ವೀರಶೈವ ಸಮಾಜದ ಒಂದೇ ಒಂದಾದ ಮನೆಯಲ್ಲಿ ವಾಸಿಸುತ್ತಿರುವರಾದ್ದರಿಂದ ನಾವೆಲ್ಲರೂ ಪರಸ್ಪರ ಬಂಧುಗಳಾಗಿರುವೆವು. ನಾವು ವಿಭಕ್ತರಾಗುವದಕ್ಕಿಂತ ಅವಿಭಕ್ತರಾಗುವದು ನಮ್ಮ ತೇಜೋಭಿವೃದ್ಧಿಗೆ ಕಾರಣವಲ್ಲವೇ? ಪೂರ್ವ ದಿಂದಲೂ ಗುರುಸ್ಥಲದಯ್ಯನವರದೊಂದು ಕುಲ, ಭಕ್ತರದೊಂದು ಕುಲ ಹೀಗೆ ಪೂಜ್ಯ ಪೂಜಕ ಪಂಗಡದ ಭಿನ್ನತ್ವದಿಂದ ನಾವು ಕೈಬೆರಳುಗಳಂತೆ ವಿಭಕ್ತರಾಗಿ ದ್ದರೂ ಸಮಾಜ ಕಾರ್ಯಗಳಲ್ಲಿ ಒಟ್ಟುಗೂಡಿದ ಬೆರಳುಗಳಿಂದ ಯುಕ್ತವಾದ ಸುಂದರವಾದ ಹಸ್ತವಂತೆ ಬಹುಬಲಶಾಲಿಯಾಗಿರತಕ್ಕದ್ದು. ಸಮಾಜ ಬಾಂಧ ವರೇ ಸಮಾಜ ಬಾಂಧವ್ಯ ದೃಷ್ಟಿಯಿಂದ ಗುರುಸ್ಥಲದ ಅಯ್ಯನವರಿಗೂ ಭಕ್ತಾದಿಗಳಿಗೂ ಲಿಂಗಕ್ಕೂ ವಸ್ತ್ರಕ್ಕೂ ಗಂಟುಬಿದ್ದಹಾಗಿರುತ್ತದೆ. ಇ

ಸಮಾಜ ಬಾಂಧವ್ಯವು ಅತ್ಯಂತ ಶ್ರೇಷ್ಠವೂ ವ್ಯಾಪಕವೂ ಅಪರಿಹಾರ್ಯವೂ ಆವಿದ್ದಿರುತ್ತದೆ. ಇವರೊಳಗೆ ಧರ್ಮ ಬಾಂಧವ್ಯ, ವ್ಯವಸಾಯ ಬಾಂಧವ್ಯ, ರಕ್ತ ಬಾಂಧವ್ಯ ಮೊದಲಾದ ಗೌಣ ಬಾಂಧವ್ಯಗಳು ಅಂತರ್ಭೂತವಾಗಿರುತ್ತವೆ. ಸಮಾಜ ಬಾಂಧವ್ಯವು ಮನೆಯಿದ್ದ ಹಾಗೆ; ಉಳಿದ ಬಾಂಧವ್ಯಗಳು ಆ ಮನೆಯೊಳಗಿನ ಒಡವೆಗಳಿದ್ದ ಹಾಗೆ. ಸಮಾಜ ಬಾಂಧವ್ಯವನ್ನು ಮರೆತು, ಜಂಗಮ ಕುಲವನ್ನು ಕೊಲೆಗೈದು ಭಕ್ತ ಹಿತ ತತ್ಪರತೆಯನ್ನು ಕಳಕೊಳ್ಳುವವರ ಉಳಿದ ಗೌಣ ಬಾಂಧವ್ಯಗಳೆಲ್ಲ ನಿಷ್ಕ್ರಿಯವಾಗಿ ಶಿಥಿಲಗಳಾಗುವವು. ಪ್ರಿಯಬಂಧು ಅ. ಮ. ಪಾಟೀಲರೆ, ಮನೆಗೆ ಬೆಂಕಿಹತ್ತಿ ಮನೆಗೆ ಮನೆಯೇ ಸುಟ್ಟು ಬೂದಿಯಾಗುತ್ತಿರುವಾಗ ಮನೆಯೊಳಗಿನ ಪದಾರ್ಥಗಳು ಸುಟ್ಟು ಬೂದಿಯಾಗದೆ ಉಳಿಯಬಹುದೇ ? ನಮ್ಮ ಕಾಂಗ್ರೆಸ ಸರಕಾರದ ಜಾತ್ಯಾತೀತ ರಾಷ್ಟ್ರಕಾಯಿದೆ ಎಂಬ ಅಗ್ನಿಯಿಂದ ಸುಡುತ್ತಿರುವಾಗ ನಾವು ಗುರು ವರ್ಗದವರು, ನಾವು ಭಕ್ತ ವರ್ಗದವರೆಂಬ ಬಡಿದಾಟವನ್ನು ಬದಿಗೊತ್ತಿ ಈಗ ಹಿಂದೆ ನಡೆದು ಬಂದಿರುವ ರೂಢಿಯಂತೆ ಗುರುಸ್ಥಲದ ಅಯ್ಯನವರೇ ಅಷ್ಟಾವರ್ಣ ಗುರುಗಳೆಂದುಕೊಂಡು ನಡೆದು ಸಮಾಜ ಹಾಗೂ ರಾಷ್ಟ್ರ ಸಂರಕ್ಷಣೆಯ ಕಾರ್ಯದಲ್ಲಿ ತತ್ಪರರಾಗಿ ಹೊಸ ಜಂಗಮರಾಗಬೇಕೆಂಬ ಹವ್ಯಾಸವನ್ನು ಬಿಡುವದೊಳಿತು.

**ಪ್ರಶ್ನೆ:** ಶಿವಾನುಭವಿಗಳು ಭಕ್ತನನ್ನು ಕೊಂಡಾಡಿದ್ದರೂ, ಕೆಲವರು ಸ್ವಾರ್ಥಾಂಧರು ನಾವು ಭಕ್ತರಲ್ಲ, ಹುಟ್ಟಿದ ಮಾತ್ರದಿಂದ ಜಂಗಮರೆಂಬ ಅಶಾಸ್ತ್ರೀಯ, ಅವಿವೇಕ ನುಡಿಗಳನ್ನಾಡುತ್ತ ಜಂಗಮನು ಸಂಸ್ಕಾರ ವಿಶೇಷದಿಂದ ನಿರ್ಮಿತನಾಗುವನಲ್ಲದೆ, ಹುಟ್ಟಿನಿಂದಲ್ಲ. ಅಷ್ಟಾವರ್ಣಗಳೆಲ್ಲ ಸಂಸ್ಕಾರಗಳಿಂದಲ್ಲದೆ ಹುಟ್ಟಿನಿಂದಲ್ಲವೆಂದೂ ಮತ್ತು ಕೃತ್ರಿಮ ಅಯ್ಯನವರ ಕುಲವೆಂದೂ ಅಯ್ಯನವರ ಕುಲವನ್ನೇ ಹೀಯಾಳಿಸಿ ಬರೆದಿದ್ದೀರಿ.

**ಉತ್ತರ:** ಪಾರಮೇಶ್ವರ ತಂತ್ರವು ೮ನೇ ಪುಟದಲ್ಲಿ:

**ಶ್ಲೋಕ:** ತತೋ ವೇದಾಂತ ಸಾರಜ್ಞಾಸ್ತತಃ ಸನ್ಯಾಸಿನಃ ಪರಾಃ। ತತಃ ಪಾಶುಪತಾಃ ಶ್ರೇಷ್ಠಾ ಲಿಂಗಿನಸ್ತತ ಕೋಧಿಕಾಃ॥ ತತೋಧಿಕಾ ಮಹಾ ಶ್ರೇಷ್ಠಾ ವೀರ ಮಾಹೇಶ್ವರಾಃ ಶಿವೇ। ನತೇ ಭ್ಯೋಹ್ಯಧಿಕಃ ಕಶ್ಚಿದ್ವಿಲಶೈವಾಶ್ರಯಾತ್ಪರಃ॥

ಈ ಪದ್ಯಗಳಿಂದ ಸನ್ಯಾಸಿಗಳಿಗಿಂತಲೂ ಪಾಶುಪತರಧಿಕ; ಪಾಶುಪತರಗಿಂತಲೂ ಲಿಂಗಿಗಳಧಿಕ; ಲಿಂಗಿಗಳಿಗಿಂತಲೂ ವೀರಮಾಹೇಶ್ವರರತ್ಯಧಿಕವೆಂದು ಹೇಳಿರುವ

ಾಂದ ಹುಟ್ಟಿನಿಂದಲೇ ಯಾರೂ ಲಿಂಗಧರಿಸಿಕೊಂಡು ಹುಟ್ಟಿಲ್ಲ ಎಂಬುದು ಗೊತ್ತಿದ್ದು, ನಿಮ್ಮ ಪ್ರಶ್ನೆ ಬುದ್ಧಿಶೂನ್ಯತೆಯನ್ನು ತೋರಿಸುತ್ತದೆ. ಲಿಂಗ ಸಂಸ್ಕಾರವಾದನಂತರ ಭಕ್ತನಾಗುತ್ತಾನೆಂದು ಬಸವಾದಿ ಪ್ರಮಥರ ವಚನ ಉಂಟು.

ವಚನ: ಬೀದಿಯ ಬಸವಂಗೆ ದೇವಾಲಯದ ಪಶುವಿಂಗೆ! ಹುಟ್ಟಿದ ಕರ, ಹೋರಿಗಳು ಗೂಳಿಗಳಪ್ಪವೆ ಲಿಂಗಮುದ್ರೆಯನ್ನೊತ್ತದನಕ್ಕ ! ಭಕ್ತಂಗೆ ಹುಟ್ಟಿದ ಮಕ್ಕಳೆಂದರೆ ! ಅಂಗದ ಮೇಲೆ ಲಿಂಗವಿಲ್ಲದನಕ್ಕರ ಬರಿಯ ಕಾರುಣ್ಯ ಭಕ್ತರಪ್ಪರೆ ! ಅವರನೊಳಗಿಟ್ಟುಕೊಂಡು ನಡಿವ ವರ ಭಕ್ತಿಹೀನರೆನಿಸಿತು ಕೂಡಲಚನ್ನಸಂಗಮದೇವಾ ||

'ಗುರು ಬಂದು ದೀಕ್ಷಾಸಂಸ್ಕಾರಮಾಡಿ ಲಿಂಗ ಧರಿಸಿದ ನಂತರವೇ ಲಿಂಗಾಯತ' ಎಂಬಂತೆ, ಜಂಗಮ ಸಂಸ್ಕಾರವಾದನಂತರ ಜಂಗಮರಾಗುತ್ತಾರೆ. ಜಂಗಮತ್ವ ವಂಶ ಪರಂಪರ ಬಂದಿದೆ. ಹುಟ್ಟಿನಿಂದಲೇ ಗುರುತ್ವವು. ಗೌಡರ ಮನೆಯಲ್ಲಿ ಹುಟ್ಟಿದ ನಿಮಗೆ ಗೌಡರೆಂದು ಹೆಸರಿಟ್ಟ ಮೇಲೆ ಪಾಟೀಲನೆಂಬ ಉಪನಾಮ ನಿಮ್ಮ ವಂಶ ಪರಂಪರವಾಗಿ ನಡೆದು ಬಂದ ನಿಮಗೆ ಗೌಡರ ಮನೆಯವರೆಂದು ಕರೆಯುವ ರೂಢಿಯಿಲ್ಲವೇ ? ಬಣಜಿಗ, ಕುಂಬಾರ, ಗಾಣಿಗ, ಜಾಡ ಇತ್ಯಾದಿ ಜನರನ್ನು ಕುರಿತು ಜಾತಿ ಕೇಳಲು ತಟ್ಟನೇ ನಾವು ಕುಂಬಾರರೆಂದು ಹೇಳಿಬಿಡುವರು. ಅದರಂತೆ ಗುರುಜಂಗಮ ಸ್ಥಾನಗಳು ವಂಶ ಪರಂಪರೆ ಬಂದಿವೆ. ಅಂತೇ ಇವರು ಕೇಳಿದಾಕ್ಷಣವೇ ಮಹೇಶ್ವರರು, ಜಂಗಮರು, ಅಯ್ಯನವರೆಂದು ತತ್‌ಕ್ಷಣ ಹೇಳುತ್ತ ಬಂದದ್ದರಿಂದಲೂ ಶಾಸ್ತ್ರಪದ್ಧತಿ ಪ್ರಕಾರ ಜಂಗಮ ದೀಕ್ಷೆ ಮಾಡುವದರಿಂದ ಶುದ್ಧಿಯಾದ ಮಣ್ಣಿನಿಂದೇರ್ಪಟ್ಟ ಕಾಜಿನ ಬುರುಡೆ ಮೊದಲಾದವುಗಳಲ್ಲಿರುವ ದೀಪವು ಒಳಗೂ ಹೊರಗೂ ಪ್ರಕಾಶಿಸುತ್ತಿರುವಂತೆ ಮೊದಲೇ ಬಂಗಾರ, ಅದರ ಮೇಲೆ ಕುಂದಣವಿಟ್ಟರೆ ಮತ್ತಿಷ್ಟು ಪ್ರಕಾಶಿಸುವಂತೆ ದೀಕ್ಷಾ ಸಂಸ್ಕಾರದಿಂದ ತೇಜೋಮಯವಾಗಿ ನಿಷ್ಕಾಮಕರ್ಮವನ್ನಾಚರಿಸುತ್ತ ವೇದ ಶಾಸ್ತ್ರಾಧ್ಯಯನ ಸಂಪನ್ನರಾಗಿ ತನ್ನನ್ನೂ ತನ್ನ ಭಕ್ತರನ್ನೂ ಪಾಪದಿಂದ ವಿಮುಕ್ತರನ್ನು ಮಾಡುವ ಶಕ್ತಿ ಈ ಗುರುಜಂಗಮಕ್ಕಿರುವದರಿಂದ ಇವರು ಹುಟ್ಟಿನಿಂದಲೇ ಗುರುಜಂಗಮರೆಂಬುವದಕ್ಕೆ ವೀರಶೈವ ಮತೋತ್ಪತ್ತಿ ಎಂಬ ಗ್ರಂಥದಲ್ಲಿ ಕೊಟ್ಟಿರುವರು ನೋಡಿರಿ.

ಶ್ಲೋಕ: ಜೀವಯೋನಿ ಸಹಸ್ರೇಷು ಭೂತ್ವಾ ಸಂಖ್ಯಾಂ ತ್ಯಾ ಜ್ಯಾತಿಜ ।
ಅಂತ್ಯಜಾಶ್ಯತ ಶೂದ್ರೋ ಶೂದ್ರೋ ಪಾಪಂ ಚ ವಿಂಶತಿಃ ॥
ತದ್ವೈಶ್ಯ ಷೋಡಶೋರಾಜಾ । ತದ್ರಾಜ್ಯನವಮದ್ವಿಜಃ ।
ತದ್ವಿಜಾಷ್ಟಂ ಚ ಭಕ್ತಸ್ಯ ತದ್ಭಕ್ತ ಸ್ತ್ರೀಣಿ ಜಂಗಮಃ ।
ಜಂಗಮೋ ರುದ್ರರೂಪಂತು ಪುನರ್ಜನ್ಮ ನ ವಿದ್ಯತಿ ॥

ಅಂದರೆ, ಇರುವೆ ಮೊದಲು ಅನೆಕಡೆಯಾದ ಜೀವರಾಸಿಗಳೊಳಗೆ ಹುಟ್ಟಿ ಹುಟ್ಟಿ ಕಡೆಗೆ ಮನುಷ್ಯ ಜನ್ಮಕ್ಕೆ ಬರುವನು. ಇಂಥ ಮನುಷ್ಯ ಜನ್ಮಕ್ಕೆ ಮೊದಲು ಚಾಂಡಾಲ ಜನ್ಮವು, ಅಂಥ ಚಾಂಡಾಲ ಜನ್ಮದಲ್ಲಿ ನೂರು ವೇಳೆ ಹುಟ್ಟಿ ಮತ್ತೆ ಶೂದ್ರ ಜನ್ಮಕ್ಕೆ ಬರುವನು. ಶೂದ್ರ ಜನ್ಮದಲ್ಲಿ ಇಪ್ಪತ್ತೈದು ವೇಳೆ ಹುಟ್ಟಿ ಮತ್ತೆ ವೈಶ್ಯ ಜನ್ಮಕ್ಕೆ ಬರುವನು. ವೈಶ್ಯ ಜನ್ಮದಲ್ಲಿ ಹದಿನಾರು ವೇಳೆ ಹುಟ್ಟಿ, ಮತ್ತೆ ಕ್ಷತ್ರಿಯ ಜನ್ಮಕ್ಕೆ ಬರುವನು. ಆ ಕ್ಷತ್ರಿಯ ಜನ್ಮದಲ್ಲಿ ಒಂಭತ್ತು ವೇಳೆ ಹುಟ್ಟಿ ಬ್ರಾಹ್ಮಣ ಜನ್ಮಕ್ಕೆ ಬರುವನು. ಆ ಬ್ರಾಹ್ಮಣ ಜನ್ಮದಲ್ಲಿ ಎಂಟು ವೇಳೆ ಹುಟ್ಟಿ ಲಿಂಗವಂತ ಜಾತಿಗೆ ಬರುವನು. ಆ ಲಿಂಗವಂತ ಜಾತಿಯಲ್ಲಿ ಮೂರು ವೇಳೆ ಹುಟ್ಟಿ ಜಂಗಮ ಜಾತಿಗೆ ಬರುವನು. ಇಂಥ ಜಂಗಮ ಜಾತಿಯಲ್ಲಿ ಹುಟ್ಟಿದ ಮೇಲೆ ಆವನಿಗೆ ಪುನರ್ಜನ್ಮವಿಲ್ಲ. ಇವನೇ ಸಾಕ್ಷಾತ್ ರುದ್ರರೂಪನೆಂದು ತಿಳಿದು ಅಷ್ಟಾವರ್ಣಗಳಲ್ಲಿ ಶಿವನಸಾಕಾರ ಮೂರ್ತಿ ಸಕಲರೂಪವೇ ಗುರುವೆಂದು ಹೆಸರುಳ್ಳದ್ದು. ಆ ಶಿವನ ಸಕಲ ನಿಷ್ಕಲಮೂರ್ತಿಯೇ ಲಿಂಗವೆಂಬ ಹೆಸರುಳ್ಳದ್ದು. ಆ ಶಿವನ ನಿಷ್ಕಲ ಮೂರ್ತಿಯೇ ಜಂಗಮವೆಂಬ ಹೆಸರುಳ್ಳದ್ದೆಂದು ಗುರ್ತಿಸಿ ಬಸವಾದಿ ಪ್ರಮಥರು ಹಾಡಿದ ವಚನ ನೋಡಿರಿ.

ವಚನ: ಸುರತರು ವೃಕ್ಷದೊಳಗಲ್ಲ! ಸುರಧೇನು ಪಶುವಿನೊಳಗಲ್ಲ! ಪರುಷ ಪಾಷಾಣದೊಳಗಲ್ಲ! ಶಿಷ್ಯನ ಭಾವಕ್ಕೆ ಗುರು ನರನಲ್ಲ! ಗುರುವೇ ಪರಮೇಶ್ವರನೆಂದು ಭಾವಿಸಬಲ್ಲರೇ ಶಿಷ್ಯನೆಂಬೆನಯ್ಯ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ ॥

ಮೈಲಾರ ಬಸವಲಿಂಗ ಶರಣರ ವಚನ ನೋಡಿರಿ.

ವಚನ: ಗುರುವೇ ಭಕ್ತರಕಲ್ಪ! ತರುವೇ ಸಜ್ಜನ ಮನೋಹರವೇ ನಿಜಭಕ್ತಿ ಜ್ಞಾನವೈರಾಗ್ಯ ಮಂದಿರವೇ ಮಮ್ಮ ಗುರುವೇ ಕೃಪೆಯಾಗು

ಎಂದು ಹಾಡಿರುವರಲ್ಲದೆ, "ನೀತಿ ಕ್ರಿಯಾಚರ"ದಲ್ಲಿ "ಸಿದ್ಧಾಂತ ಶಿಖಾಮಣಿ"ಯಲ್ಲಿಯ ಶ್ಲೋಕಗಳನ್ನು ನೋಡಿರಿ.

ಶ್ಲೋಕ: ಏಕ ಮೂರ್ತಿ ಸ್ತ್ರಯೋಭಾಗಾ। ಗುರುರ್ಲಿಂಗಂ ಚ ಜಂಗಮಂ। ಜಂಗ
ಮಂ ಚ ಗುರುರ್ಲಿಂಗಂ ತ್ರಿವಿಧಂ ತ್ಯೇಕಮುಚ್ಯತೆ॥ ಮಣಿಮುಖ್ಯಂತು
ರುದ್ರಾಕ್ಷಿ ಗಿರಿಮುಖ್ಯಂತು ಪರ್ವತಾಃ। ಪಶುಮುಖ್ಯಂತು ವೃಷಭಾಣಾಂ।
ನರಮುಖ್ಯಂತು ಜಂಗಮಃ॥

ಶ್ಲೋಕ: ಏಕ ಏವ ಶಿವಸಾಕ್ಷಾತ್ ಸರ್ವಾನುಗ್ರಹ ಕಾರಕಃ।
ಗುರುಜಂಗಮ ಲಿಂಗಾತ್ಮಾ ವರ್ತತೆ ಭುಕ್ತಿಮುಕ್ತಿದಃ॥

ವೇದ ಪ್ರಸಿದ್ಧವಾಗಿ ವೀರಶೈವ ಸಮಸ್ತ ಭಕ್ತರಿಗೆ ಅನುಗ್ರಹವನ್ನು ಮಾಡುವ ಸ್ವತಂತ್ರವಾದ ಪರಮೇಶ್ವರನೇ ಈ ಗುರು, ಲಿಂಗ, ಜಂಗಮರು. ಅಷ್ಟಾವರ್ಣ ಮೂಲ ಮೂರ್ತಿಗಳೆಂದು ಬಸವಾದಿ ಶಿವಶರಣರು ಇವರಲ್ಲಿ ಭಕ್ತಿಯನ್ನು ವಹಿಸಿ ಹಾಡಿರುವ ವಚನ ನೋಡಿರಿ.

ವಚನ: ಕೃತಯುಗ ಮೂವತ್ತುನಾಲ್ಕು ಲಕ್ಷ, ಐವತ್ತಾರುಸಾವಿರ ವರುಷದಲ್ಲಿ ಕೇದಾರ ದೇವರ ಮೂಲಸ್ಥಾನ। ತ್ರೇತಾಯುಗ ಹದಿನೇಳು ಲಕ್ಷ ಇಪ್ಪತ್ತೆಂಟು ಸಾವಿರ ವರುಷಗಳಲ್ಲಿ ಶ್ವೇತ ರಾಮೇಶ್ವರ ಮೂಲ ಸ್ಥಾನ। ದ್ವಾಪಾರಯುಗ ಎಂಟು ಲಕ್ಷ ಅರವತ್ತುನಾಲ್ಕು ಸಾವಿರ ವರುಷದಲ್ಲಿ ಸೋಮೇಶ್ವರ ದೇವರ ಮೂಲ ಸ್ಥಾನ। ಕಲಿಯುಗ ನಾಲ್ಕು ಲಕ್ಷ ಮೂವತ್ತೆರಡು ಸಾವಿರ ವರುಷಗಳಲ್ಲಿ ಶ್ರೀ ಗಿರಿಯ ಮಲ್ಲಿಕಾರ್ಜುನ ದೇವರ ಮೂಲ ಸ್ಥಾನ। ಇದು ಕಾರಣ ಕೂಡಲ ಸಂಗಮದೇವ ನಿಮ್ಮ ಸಾಕ್ಷಿಯಾಗಿ ಭಕ್ತರಿಗೆ ಗುರು-ಜಂಗಮರೇ ಮೂಲಸ್ಥಾನವಯ್ಯ॥

ಈ ಗುರು ಜಂಗಮರು ಯುಗಯುಗಾಂತರ ಹುಟ್ಟಿಬಂದ ಮೂಲಕ, ಇವರಲ್ಲಿ ಭಕ್ತಿಯನ್ನು ವಹಿಸಿ ಇವರು ಪರಶಿವನ ಮೂರ್ತಿಯೆಂದು ಭಾವಿಸಿದ್ದಾರೆ. ಶಿವಶರಣರ ವಚನ ನೋಡಿರಿ. ವೀರಶೈವಾಮೃತಪುರಾಣ, ೭ನೇ ಖಂಡ, ನಾಲ್ಕನೇ ಸಂಧಿ ಶಂಕರ ಸಂಹಿತೆಯಲ್ಲಿ ಆಧಾರ ಕೊಟ್ಟಿರುವರು.

ಶ್ಲೋಕ: ದೀಕ್ಷಾ ಕರ್ತಾ ಜಂಗಮಶ್ಚ ಜಗದ್ವಂದ್ಯೋಹಿ ಜಂಗಮಃ।
ಘೃಣಾವೃಷ್ಟಿಘೃಣಾವಾಕ್ಯೋ॥

ಶ್ಲೋಕ: ವೀರೋನಂದೀ ವೃಷಶ್ಚೈವ। ಭೃಂಗೀ ಸ್ಕಂಧಸ್ತಥೈವ। ಮತ್ಸ್ಯರೂಪಾ। ಸಮುತ್ಪನ್ನಾಃ ಪಂಚಗೋತ್ರಾಧಿ ಕಾರಿಣಃ। ರೇಣುಕೋದಾರುಕಶ್ಚೈವ ಶಂಕಕರ್ಣಶ್ಚವೇಸುಕಃ। ವಿಶ್ವಕರ್ಣಶ್ಚ ಪಂಚೆತೆಪಂಚ ಗೋತ್ರ ಸಮುದ್ಭವಾಃ। ಏತೇಷಾಂ ಪ್ರತಿನಾಮಾನಿ ಯುಗಬೇದೇನ ಚಶೃಣು।

ವಚನ: ಆದಿಯಲ್ಲಿ ಶಿವಬೀಜ ತಾನಿಲ್ಲದಿದ್ದರೆ ಜಂಗಮ ಪ್ರಾಣಿಯಾದ ಪರಿಯಂತೋ। ಆದಿಯಲ್ಲಿ ಶಿವಬೀಜ ತಾನಿಲ್ಲದಿದ್ದರೆ ಪಾದೋದಕ, ಪ್ರಸಾದ ಸಂಬಂಧಿಯಾದ ಪರಿಯಂತೋ। ಆದಿಯಲ್ಲಿ ಶಿವಬೀಜ ತಾನಿಲ್ಲದಿದ್ದರೆ ವಿಭೂತಿ, ರುದ್ರಾಕ್ಷಿ, ಷಡಕ್ಷರ ಧಾರಣವಾದ ಪರಿಯಂತೋ। ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಪ್ರಣಯ ಪಂಚಾಕ್ಷರಿ ಈ ಎಂಟು ಶುದ್ಧ ಚಿದ್ರೂಪ ಪರಶಿವ ತಾನೇ ನೋಡಾ! ಆ ಪರಶಿವ ಬೀಜ ಚಿತ್ತು; ಆ ಚಿತ್ತಿನ ಪ್ರಭೆಯಲ್ಲಿ ಶರಣನುದಯಿಸಿದನು। ಇದು ಕಾರಣ ಆದಿಯಲ್ಲಿ ಶಿವಬೀಜ ಕಾರುಣ್ಯ ಶುದ್ಧ ನಿರ್ಮಲನೋಡಾ ಶರಣನು, ಗುರುಶಿವಸಿದ್ಧೇಶ್ವರ ಪ್ರಭುವೇ॥

ಇಂಥ ಅಷ್ಟಾವರ್ಣಾಂತರ್ಗತರಾದ ಗುರುಸ್ಥಲದ ಜಂಗಮರು ತಮ್ಮ ಸ್ತ್ರೀಯರಿಗೆ ಗರ್ಭವತಿಯಾದೊಡನೆಯೇ ಜ್ಯೋತಿಷ್ಯ ಶಾಸ್ತ್ರೋಕ್ತ, ಪುಂಸವನ, ಶ್ರೀಮಂತ, ಗರ್ಭಲಿಂಗಧಾರಣ ಮೊದಲಾದ ಸಂಸ್ಕಾರಕರ್ಮ ಮಾಡಿಸಿ ವರ್ಣಾಶ್ರಮಧರ್ಮ ಪದ್ಧತಿ ಪ್ರಕಾರ ಅರಮನೆ, ಗುರುಮನೆಯವರೆಂದು ಈ ಗುರುಮಠದವರೇ ದೀಕ್ಷಾ ಮಾಡುವ ಅಧಿಕಾರ ಕರ್ತರಾಗಿರುವರು. ಆದ್ದರಿಂದ ಇವರು ಭಕ್ತರಲ್ಲ. ಇವರೇ ಇಷ್ಟಲಿಂಗಕ್ಕೆ ಸಂಸ್ಕಾರಮಾಡಿ ವೀರಶೈವ ಭಕ್ತಾದಿಗಳಿಗೆ ಲಿಂಗಧಾರಣ ಮಾಡುತ್ತ ಬಂದಿರುತ್ತಾರೆ. ಜಂಗಮ ಸಂಸ್ಕಾರ ಅಂದರೆ ಅಯ್ಯಾಚಾರ ಮೊದಲಾದವುಗಳನ್ನು ಮಾಡಿಸುತ್ತಾರೆ. ಆದಕಾರಣ ಹುಟ್ಟಿನಿಂದಲೇ ಜಂಗಮ ತತ್ವವೆಂಬುದು ದೀಕ್ಷಾ ಸಂಸ್ಕಾರವಾದನಂತರ ಅಧಿಕಾರ ಸಿದ್ಧಾಂತವದೆ. ಇವರು ತಮ್ಮ ತರುವಾಯ ತಮ್ಮ ಮಕ್ಕಳಿಗೆ ಈ ಅಧಿಕಾರ ಸಾಗಿಸುತ್ತಾ ವಂಶಪರಂಪರೆ ಬಂದಿದ್ದರಿಂದಲೇ ಅಷ್ಟಾವರ್ಣಗಳಲ್ಲಿ ಇವರಿಗೇನೇ ಪ್ರಥಮ ಸ್ಥಾನವಿದೆ. ನಿಮ್ಮಂಥವರಿಗೆ ಈ ಸ್ಥಾನ ಸಿಗಲಾರದು.

ಶ್ಲೋಕ: ಆಚಾರ್ಯಸ್ಯಾವಮಾನೇನ ಶ್ರೇಯಃ ಪ್ರಾಪ್ತಿರ್ವಿಹನ್ಯತೆ॥
ತಸ್ಮಾನ್ನಿ ಶ್ರೇಯಸ ಪ್ರಾಪ್ತ್ಯೈ ಪೂಜಯೇತ್ತಂ ಸಮಾಹಿತಃ॥

ಗುರುವಿಗೆ ಅಪಮಾನವನ್ನು ಮಾಡುವದರಿಂದ ಭೋಗ ಮೋಕ್ಷಗಳಿಗೆ ಹಾನಿಯುಂಟಾಗುತ್ತದೆ. ಅದಕಾರಣ ಭೋಗ ಮೋಕ್ಷ ಹೊಂದುವದಕ್ಕೆ ಆ ಗುರುವಿನಲ್ಲಿ ನಿಶ್ಚಲ ಮನಸ್ಸುಳ್ಳವನಾಗಬೇಕೆಂದು ಹೇಳಿದೆ.

ಶ್ಲೋಕ: ಯಶ್ಶಿವಸ್ಸ ಗುರುರ್ಜ್ಞೇಯೋ ಯೋಗುರುಸ್ಸಶಿವಸ್ಮೃತಃ ।
ನ ತೇಯೋರಂತರಂ ಕುರ್ಯಾತ್ ಜ್ಞಾನವಾನ್ ಮಹಾಮತಿಃ ॥

ಯಾವನು ಶಿವನೋ ಆತನೇ ಗುರುವೆಂದೂ ಯಾವನು ಗುರುವೋ ಆತನೇ ಶಿವನೆಂದೂ ಸ್ಮರಿಸಲ್ಪಡುವದು. ಈ ಗುರು, ಶಿವ ಇವರೀರ್ವರಲ್ಲಿ ಭೇದವನ್ನು ಎಣಿಸಬಾರದೆಂದು:

ಶ್ಲೋಕ: ಧ್ಯಾನಮೂಲಾ ಗುರೋರ್ಮೂರ್ತಿಃ ಪೂಜಾಮೂಲಂ ಗುರೋಃ ಪದಂ ।
ಮಂತ್ರ ಮೂಲಂ ಗುರೋರ್ವಾಕಂ ಮುಕ್ತಿ ಮೂಲಾ ಗುರೋಃ ಕೃಪಾ ॥

ಹೀಗೆ ಗುರುವಿನ ಸಹಜಾಕೃತಿಯೇ ಧ್ಯಾನಕ್ಕೆ ಕಾರಣವಾಗಿರುವದು. ಗುರುವಿನ ಪಾದವೇ ಪೂಜೆಗೆ ಯೋಗ್ಯವಾಗಿರುವದು. ಗುರುವಿನ ವಾಕ್ಯವೇ ಮಂತ್ರಕ್ಕೆ ನಿಧಾನವಾಗಿರುವದು. ಗುರುಕೃಪೆಯೇ ಮುಕ್ತಿಗೆ ಬೀಜವಾಗಿರುವದು ಎಂಬೀ ಪ್ರಮಾಣದಿಂದ ಧ್ಯಾನಿಸಿಕೊಳ್ಳುವದಕ್ಕೂ ಪೂಜಿಸಿಕೊಳ್ಳುವದಕ್ಕೂ ಮಂತ್ರ ವನ್ನಿತ್ತು ಮುಕ್ತಿನೀಯುವದಕ್ಕೂ ಈ ಗುರುವರ್ಗದವರು ಮುಖ್ಯ ಕಾರಣರು.

ಕಾರಣ ಇವರು ಸಾಕ್ಷಾತ್ ಶಿವಸ್ವರೂಪರೆಂದು ಶಿವಶರಣರು, ಶಿವಶರಣೆ ಯರು ಈ ಗುರು, ಲಿಂಗ, ಜಂಗಮಕ್ಕೆ ತನು, ಮನ, ಧನದಿಂದ ವಂಚನೆ ಯಿಲ್ಲದೇ ಅರ್ಚಿಸಿರುವದರಿಂದ ಇವರಿಗೆ ಪ್ರತಿ ಸಂಸ್ಕಾರ ಶಬ್ದವೇಯಿಲ್ಲ. ಹೊಸ ಹೊಸದಾಗಿ ಮನಸ್ಸಿಗೆ ಬಂದಂತೆ ಸಂಸ್ಕಾರ ಹುಟ್ಟಿಸುವದು ಜಾತಿಗೇರ ಆಟ ವಲ್ಲ. ಇವರಿಗೆ ಹುಟ್ಟಿನಿಂದಲೇ ಗುರುತ್ವ ಜಂಗಮತ್ವದ ಜನ್ಮಸಿದ್ಧ ಹಕ್ಕೆಂದು ತಿಳಿಯಿರಿ

ವಚನ: ಯಾತ ತಲೆ ಬಾಗಿದರೇನು । ಗುರುಭಕ್ತನಾಗಬಲ್ಲದೇ ? । ಇಕ್ಕಳ
ಕ್ಕೆಮುಗಿದರೇನು । ಭೃತ್ಯಾಚಾರಿಬಲ್ಲದೇ ? । ಗಿಳಿ ಓದಿದರೇನು ।
ಲಿಂಗವೇಧಿಯಾಗಬಲ್ಲದೇ ? । ಕೂಡಲ ಸಂಗನ ಶರಣರು । ಬಂದ
ಬರವ ನಿಂದನಿಲವ ಅನಂಗ ಸಂಗಿಗಳವರು ನಿಮ್ಮನ್ನೆತ್ತಬಲ್ಲರು ॥

ಎಂಬಂತೆ, ಹಿಂದಿನ ಶರಣರು ಗುರು, ಲಿಂಗ, ಜಂಗಮರಲ್ಲಿ ಕೇವಲ ಭಕ್ತಿ ಯನ್ನಿಟ್ಟು ಪೂಜಿಸಿದ ಪವಿತ್ರ ಶರಣರ ನಾಮವನ್ನಿಟ್ಟುಕೊಂಡು ಇಂದು ಅದೇ

ಜಂಗಮ ಕುಲವನ್ನು ನಿಂದಿಸಿ ನಾಶ ಮಾಡಬೇಕೆಂಬ ದುಷ್ಟ ಹೇತುವಿನಿಂದಲೂ ಸ್ವಾರ್ಥಾಭಿಮಾನದಿಂದಲೂ ಪ್ರೇರಿತರಾದ ನಿಮ್ಮ ಸಂಘವು "ಹೂ ಮಾರಿದ ಅಂಗಡಿಯಲ್ಲಿ ಹುಲ್ಲು ಮಾರಿತು" ಎಂಬ ಗಾದೆಯಂತಾಯಿತು. ನೀತಿ ತಪ್ಪಿ ದುರ್ಮಾರ್ಗ ಪ್ರವೃತ್ತರಾದವರ ಪರಿಣಾಮ ಏನಾಗಿರುವದೆಂಬುದನ್ನು ನೋಡಿರಿ. ನೀಚ ಸ್ವಾರ್ಥತೆಗೆ ಬಲಿಬಿದ್ದ ರಾವಣನು ಸೀತೆಯನ್ನು ಕೆಣಕಿ ತನ್ನ ಸರ್ವಸ್ವವನ್ನು ನಾಶಮಾಡಿಕೊಂಡನು; ಪ್ರತಿ ಸೃಷ್ಟಿಯನ್ನು ಮಾಡುವ ಶಕ್ತಿಯಿದ್ದ ವಿಶ್ವಾಮಿತ್ರನು ಬ್ರಾಹ್ಮಣನಾಗಬೇಕೆಂಬ ಉದ್ದೇಶವನ್ನು ಒಳಗಿಟ್ಟುಕೊಂಡು ವಸಿಷ್ಠರನ್ನು ಹತಮಾಡಲುದ್ಯುಕ್ತನಾದನು. ಕೌರವರು ಭೂಮಿ ಆಸೆಯಿಂದ ಪಾಂಡವರನ್ನು ತೊಂದರೆ ಪಡಿಸಿ ತಾವೇ ನಾಶವಾದರು. ಹಾಗೆ ನೀವು ಗುರು ಜಂಗಮರ ಕುಲವನ್ನು ನಾಶಮಾಡಲು ಹೊರಟ ನಿಮ್ಮ ಗತಿ ಏನಾಗುವದೋ ದೇವರೇ ಬಲ್ಲ. ಹುಟ್ಟಿನಿಂದಲೇ ವಂಶಪರಂಪರವಾಗಿ ಬಂದ ಗುಣೋತ್ಕರ್ಷವನ್ನು ಸಹಿಸದೆ, ಗುರು ಜಂಗಮರ ಪದವಿಯನ್ನು ಪಡೆಯಬೇಕೆಂಬ ದುರಾಶೆಯಿಂದ ಆ. ಮ. ಪಾಟೀಲರು ಹಾಗೂ ಶರಣಸಂಘವು ಬಚ್ಚಲ ಕುಣಿಯೊಳಗಿನ ಕಳಕಿನ ಹುಳಗಳಿದ್ದಂತೆಯೇ ಸರಿ. ಆ ಹುಳಗಳು ಆ ಕಳಕ ನೀರನ್ನೇ ಪರಮ ಪುರುಷಾರ್ಥವೆಂದು ತಿಳಿದು, ಆ ಕಳಕನ್ನೇ ತಿಂದು ಆ ಕಳಕಿನಲ್ಲಿಯೇ ಹೊರಳಾಡುತ್ತ ಅಲ್ಲಿಯೇ ಸತ್ತು ಆ ಕಳಕನ್ನೇ ಮತ್ತಿಷ್ಟು ಹೆಚ್ಚಿಸಿ, ವಿವಿಧ ರೋಗಗಳ ಬೀಜವನ್ನು ನಾಲ್ಕೂ ಕಡೆಗೆ ಹಬ್ಬಿಸುವಂತೆ, ಸನಾತನ ಧರ್ಮ ಪದ್ಧತಿಯನ್ನು ಅಳಿಯುವ ಈ ಹುಳಗಳನ್ನು ನಾಶಮಾಡದಿದ್ದರೆ ಸಾಂಸರ್ಗಿಕ ರೋಗ ವೀರಶೈವ ಸಮಾಜದಲ್ಲಿ ಹಬ್ಬಿ, ಸಮಾಜ ನಾಶವಾಗದೇ ಉಳಿಯಲಾರದು. ಇಂಥವರು ಶರಣ ಸೇವಾಸಂಘಕ್ಕೆ ಅಯೋಗ್ಯರೇ ಸರಿ.

**ಪ್ರಶ್ನೆ:** ಹಿಂದಿನ ಮಹಿಮರೆಲ್ಲ ಭಕ್ತರನ್ನೇ ಕೊಂಡಾಡಿರುವರಲ್ಲದೆ ಅಯ್ಯನವರ ಹೆಸರನ್ನು ಕೂಡ ಎತ್ತಿಲ್ಲ. ಅಂದಬಳಿಕ ಇದು ಮಧ್ಯದಲ್ಲಿ ಬಂದ ಒಂದು ಕೃತ್ರಿಮ ಹೆಸರಲ್ಲವೇ? ಜಂಗಮರೆಂದರೆ ಅಷ್ಟಾವರ್ಣಾಂತರ್ಗತ ಸರ್ವಶ್ರೇಷ್ಠ ಜಗತ್ಪೂಜ್ಯ ವಸ್ತು. ಅದನ್ನು ಸಾಮಾನ್ಯ ಲಿಂಗ ಭಕ್ತನು ತನಗೆ ಹಚ್ಚಿಕೊಳ್ಳುವದು ಮಹಾದ್ರೋಹ. ನಿಜವಾದ ಜಂಗಮರು ನಾಮಧಾರಿ ಜಂಗಮರನ್ನು ಸಹಿಸರು. ಗಣಶಬ್ದವು ಸಮೂಹ ವಾಚಕವು; ಅದನ್ನು ಬಹು ವಚನದಲ್ಲಿಯೇ ಗಣಂಗಳೆನ್ನುವರು; ಹೀಗೆ ಬರೆದಿರುವಿರಿ.




**ಉತ್ತರ:** ಜಂಗಮರು ಯಾರೆಂದರೆ:

**ಶ್ಲೋಕ:** ಏಕ ಏವ ಶಿವಸ್ಸಾಕ್ಷಾತ್ಸರ್ವಾನುಗ್ರಹಕಾರಕಃ।
ಗುರು ಜಂಗಮ ಲಿಂಗಾತ್ಮಾ ವರ್ತತೇ ಭಕ್ತಿ ಮುಕ್ತಿದಃ॥

ಲೋಕ ಪ್ರಸಿದ್ಧನಾಗಿ ತನ್ನ ಸಮಸ್ತ ಭಕ್ತರಿಗೆ ಅನುಗ್ರಹವನ್ನು ಮಾಡುವ ಸ್ವತಂತ್ರನಾದ ಪರಮೇಶ್ವರನೊಬ್ಬನೇ ಗುರುರೂಪ, ಜಂಗಮರೂಪ, ಲಿಂಗರೂಪ ನಾಗಿ ಭೋಗ ಮೋಕ್ಷಗಳನ್ನು ಕೊಡುವವನಾಗಿರುವ ಪ್ರಮಾಣದಿಂದ:

**ಶ್ಲೋಕ:** ಏಕ ಮೂರ್ತಿ ಸ್ತ್ರಯೋಃಭಾಗಾ ಗುರುರ್ಲಿಂಗಂ ಚ ಜಂಗಮಂ।
ಜಂಗಮಂ ಚ ಗುರುರ್ಲಿಂಗಂ ತ್ರಿವಿದಂತ್ಯೇಕ ಮುಚ್ಯತೆ॥

ಒಂದು ಮೂರ್ತಿಯೇ ಗುರು ಎಂತಲೂ ಲಿಂಗವೆಂತಲೂ ಜಂಗಮ ವೆಂತಲೂ ಮೂರು ಭಾಗವಾಗಿರುವದರಿಂದ ಈ ಗುರುಸ್ಥಲದ ವಂಶ ಮಧ್ಯ ದಿಂದ ಬಂದದ್ದಲ್ಲ. ಪೀಠಾಚಾರ್ಯರ ಆಜ್ಞೆಯಂತೆ ಗುರು, ಜಂಗಮ ಸ್ಥಾನ ಗಳು ನಿನ್ನಂಥ ನಾಮಧಾರಿ ಭಕ್ತನಿಗೆ ಈ ಸ್ಥಲಗಳು ಸಲ್ಲವೆಂಬದು ಬರೋ ಬರಿ. ಈ ಪೂರ್ವೋಕ್ತ ಪಂಚವಿಧ ಆಚಾರ್ಯರು ಅವರಿಂದ ಪಾಣಿಗ್ರಹಿತರಾದ ಸ್ತ್ರೀಯರು ಮತ್ತು ಈ ಪೂರ್ವೋಕ್ತ ಪಂಚವಿಧ ಪಂಚಮರು ಕ್ರಮವಾಗಿ ವೀರಶೈವ ವಂಶಾವಳಿಗೆ ಮೂಲಭೂತ ಸ್ತ್ರೀ ಪುರುಷರಿರುವರು.

ಆ. ಮ. ಪಾಟೀಲರೇ, ಇವರು ನಿಮ್ಮಂತೆ ಲಿಂಗಭಕ್ತರಲ್ಲ. ಅಯ್ಯನವ ರೆಂಬುದು 'ಆರ್ಯ' ಎಂಬ ಸಂಸ್ಕೃತ ಶಬ್ದದಿಂದ ಹುಟ್ಟಿದ್ದು ಶ್ರೇಷ್ಠ ಎಂಬ ಅರ್ಥ. ಶಿವಭಕ್ತ ವೃಂದದಿಂದ ಪೂಜಿಸಲ್ಪಡತಕ್ಕವರಾದ್ದರಿಂದ ಈ ಅಯ್ಯನವ ರೆಂಬ ನಾಮವು ಬಂತು. ಗಣಾಧೀಶ್ವರರೆಂದರೆ ಶಿವಭಕ್ತ ಸಮಾಜಕ್ಕೆ ಅಧಿಪತಿ ಗಳಾದ್ದರಿಂದ ಈ ಗಣಾಧೀಶ್ವರವೆಂಬ ನಾಮ ಪ್ರಾಪ್ತವಾಗಿದೆ. ಜಂಗಮರೆಂದರೆ ವಿಶೇಷ ಜ್ಞಾನವುಳ್ಳವರೆಂಬ ಅರ್ಥ. ವೀರಶೈವ ಮತದಲ್ಲಿ ಮೂವತ್ತಾರು ತತ್ವ ಗಳು. ಅವುಗಳಲ್ಲಿ ಶಿವತತ್ವವೇ ಶ್ರೇಷ್ಠವಾದ ಕೊನೆಯ ತತ್ವವು. ಆ ಶಿವತತ್ವವೇ ಸ್ವಸ್ವರೂಪವೆಂದು ವಿಶೇಷವಾಗಿ ತಿಳಿಯುವನಾದ್ದರಿಂದ ಈ ಜಂಗಮವೆಂಬ ಹೆಸರು ಬಂದಿದೆ. ಈ ಪ್ರಕಾರ ಇದ್ದು ಅಷ್ಟಾವರ್ಣಾಂತರ್ಗತ ಜಂಗಮರು ಸಹಿಸರೆಂದು ಬರೆದಿರುವ ನೀವು, ಹೆಣ್ಣುಮಕ್ಕಳು ಒಂದೇ ರೂಪವಿದ್ದಾಗ್ಯೂ ತಾಯಿ, ಮಗಳು, ಸೊಸೆ, ಹೆಂಡತಿ, ಅಕ್ಕ, ತಂಗಿಯರೆಂಬ ಭಿನ್ನಭಾವನೆ ಯಿದ್ದಂತೆ ಈ ಜಂಗಮ ಶಬ್ದದಲ್ಲಿ ತಾರತಮ್ಯ ಭಾವನೆಗಳಿವೆ.

ಶ್ಲೋಕ: ಚಿತ್ತಲಾಂಪಜಪರ್ ಶಾಂತಸ್ಸತ್ಯ ವಾಙ್ನರಹಂಕೃತಿ ನಿರ್ಮತ್ಸರೋನಿರು ತ್ರೇಕಃ ಕಾಮಾದಿ ಗುಣವರ್ಜಿತಃ। ಸ್ವದಾರಾನಿರತಶ್ಶಾಂತಃ ಸಮಸ್ತಾಗಮ ಪಾರಗಃ। ವಾಗ್ಮೀಗಭೀರ ಸ್ಸಂತುಷ್ಟಃ ಪ್ರಗಲ್ಭಃ ಕರುಣಾಸ್ಪದಃ। ಅಧೀತ ವೇದಾಗವಾದಿ ಸರ್ವತಂತ್ರೇಷು ಕೋವಿದಃ। ಪುರಾಣ ಸಂಹಿತಾವೃತ್ತಸ್ತದರ್ಥ ಪ್ರತಿಪಾದಕಃ। ಮಂತ್ರಶಾಸ್ತ್ರಕೃತಾ ಭ್ಯಾಸೋಯಂತ್ರೋದ್ಧಾರವಿದಾನ ವತ್। ಶಿವಭಕ್ತ ಶ್ರೀವದ್ಯಾಯಿಃ ಗುರುಭಕ್ತೋ ಗುರುಪ್ರಿಯಃ। ಶಿವೈಕಾಹಿತ ಚಿತ್ತಶ್ಚ ಶಿವಲಿಂಗಾರ್ಚನಾಪರಃ। ಸಂಪ್ರದಾಯ ವಿಶೇಙ್ಞ ಸ್ಸಾಧು ಭಕ್ತಜನ ಪ್ರಿಯಃ। ಸದಾಚಾರೈಕ ನಿರತೋ ಸದ್ವಂಶೀನ ಸಮುದ್ಭವಃ। ಏವಮಾದಿ ಗುಣೋಪೇತೋ ಗುರು ಪೀಠಾದಿರೋಕಃ॥

ಲಿಂಗದಲ್ಲಿ ಸಮುಪಸ್ಥಿತವಾದ, ಪರತತ್ವಬೋಧಕನಾದ, ಚಿತ್ಕಲೆಯ ಜಪಾಸಕ್ತನಾದ, ಶಾಂತನಾದ, ಸತ್ಯಸಂಧನಾದ, ನಿರ್ಮಾತ್ಸರ್ಯನಾದ, ಕಾಮಾದಿ ಗುಣರಹಿತನಾದ, ಏಕಪತ್ನೀ ವ್ರತವುಳ್ಳವನಾದ, ಕರುಣಾಶಾಲಿಯಾದ, ವೇದಾಗ ಮಾದಿ ಸರ್ವತಂತ್ರದಲ್ಲಿ ನಿಪುಣನಾದ, ಮಂತ್ರೋದ್ಧರಣ ಕ್ರಮವನ್ನು ಬಲ್ಲವ ನಾದ, ಸದಾಲಿಂಗಾರ್ಚನಾಸಕ್ತನಾದ, ಶಿವಭಕ್ತರಲ್ಲಿ ಪ್ರೀತಿವುಳ್ಳವನಾದ, ಸದ್ವಂಶ ದಲ್ಲಿ ಹುಟ್ಟಿದವನಾದ ಈ ಎಲ್ಲ ಗುಣಗಳುಳ್ಳವನೇ ಅಷ್ಟಾವರ್ಣ ಗುರು ಪೀಠಾಧಿ ಕಾರಕ್ಕೆ ಯೋಗ್ಯರೆಂದು ಆಗಮಗಳಲ್ಲಿ ಉಕ್ತವಾಗಿರುವದು.

ಇಂಥ ಮಠಸ್ಥರಲ್ಲಿಯೇ ಗುರುಸ್ಥಲದ ಜಂಗಮರು ಮುಖ್ಯರು. ಈ ಗುರು ಸ್ಥಲ ಜಂಗಮನೇ ಉತ್ಪತ್ತಿಸ್ಥಾನವಾದ್ದರಿಂದ ಇವರಿಗೂ ಜಂಗಮ ನಾಮ ಉಂಟು. ವೀರಶೈವ ಧರ್ಮನಿಷ್ಠರು ಧಾರ್ಮಿಕ ವ್ಯವಹಾರದಲ್ಲಿ ಶ್ರೇಷ್ಠ ವೈದಿಕರೆನಿಸಿದ ಅಯ್ಯನವರೆಂಬ ಶಬ್ದವನ್ನು ನಾಶಗೈಯುವದರಲ್ಲಿ ಭ್ರಮಿಷ್ಠ ರಾದ ನಿಮಗೆ ಅಯ್ಯನವರೆಂಬ ಶಬ್ದದ ಯೋಗ್ಯತೆ ನಿಮ್ಮಂಥ ಮಾಸ್ತರರಿಗೆ ಏನು ಗೊತ್ತು? ಈ ಅಯ್ಯನವರೆಂಬ ಶಬ್ದದ ಮಹತ್ವವನ್ನು ಮಹಾತ್ಮಾ ಬಸವಣ್ಣ ನವರು ಅಯ್ಯಾ ಶಬ್ದದ ಯೋಗ್ಯತೆ ತಿಳಿದು ಈ ಪ್ರಕಾರ ಹಾಡಿದ ವಚನವನ್ನು ಕಣ್ದೆರೆದು ನೋಡಿರಿ.

ವಚನ: ಅಯ್ಯಾ ಅಯ್ಯಾ ಎಂದು ಕರೆಯುತ್ತಲಿದ್ದೇನೆ। ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ। ಓ ಎನ್ನಲಾಗದೇ? ಅಯ್ಯಾ, ಆವಾ ಗಳೂ ನಿಮ್ಮ ಕರೆಯುತ್ತಲಿದ್ದೇನೆ! ಓ ಎನ್ನದೇ ಮೌನವೇ ಕೂಡಲ ಸಂಗಮದೇವ॥

ಎಂದು ಬಾರಿ ಬಾರಿಗೂ ಅಯ್ಯ ಶಬ್ದದಿಂದ ಅಂಗಲಾಚಿದರೆ, ಜ್ಞಾನದ ಮಂದಿರದ ಬಾಗಿಲು ತೆರೆದು ಅದರ ಜ್ಯೋತಿ ಅಂತರಂಗವನ್ನೆಲ್ಲ ಬೆಳಗುತ್ತದೆ ಎಂದು ಅಯ್ಯ ಶಬ್ದವನ್ನು ಉಪಯೋಗಿಸಿದ್ದಾರೆ.

ವಚನ: ಪುಣ್ಯ ಪಾಪಗಳೆಂಬವು ತಮ್ಮ ಇಷ್ಟವು ಕಂಡರೆ ಅಯ್ಯಾ ಅಂದರೆ
ಸ್ವರ್ಗ ಎಲವೋ ಅಂದರೆ ನರಕ ಕೂಡಲ ಸಂಗಮದೇವಯ್ಯಾ!

ಹೀಗೆ ಇನ್ನೂ ಅನಂತ ವಚನಗಳಲ್ಲಿ 'ಅಯ್ಯ' ಶಬ್ದವನ್ನು ಶರಣ-ಶರಣೆಯರು ಉಚ್ಚರಿಸಿದ್ದಾರೆ.

'ಅಯ್ಯ' ಶಬ್ದವು ಶಿವನ ಪ್ರತಿನಿಧಿಗಳೆಂದು ತಿಳಿದು ಮತಸ್ಥಾಪನಾಚಾರ್ಯರು ಗುರುಸ್ಥಲದ ಮಠದಯ್ಯನವರೆಂಬ ಹೆಸರು ಕೊಟ್ಟಿರುವರು. ಅಯ್ಯನವರನ್ನು ಹೀಯಾಳಿಸ ಹೋಗಿ ಆಳವಾದ ತಗ್ಗಿನಲ್ಲಿ ಬಿದ್ದಿದ್ದೀರಿ. ಚ. ಮ. ಪಾಟೀಲರೆ, ಅಯ್ಯ ಶಬ್ದ ಮಹತ್ವ ತಿಳಿದು ನಿಮ್ಮ ಹಿರಿಯರು ನಿಮಗೆ ಅಯ್ಯನಗೌಡನೆಂದು ಹೆಸರಿಟ್ಟಿದ್ದಾರೆ. 'ದೀಪದ ಬುಡದಲ್ಲಿಯೇ ಕತ್ತಲೆ' ಎಂಬಂತೆ ನಿಮ್ಮ ಹೆಸರಿನ ಶಬ್ದಾರ್ಥವೇ ನಿಮಗೆ ಗೊತ್ತಿಲ್ಲವೆಂದ ಮೇಲೆ ಸನಾತನ ವೀರಶೈವ ಪದ್ಧತಿ ನಿಮಗೆ ಗೊತ್ತಿರದೇ ಇರುವದು ಸಹಜವಾಗಿದೆ. ಜಂಗಮದ ಜಂಗಮಸ್ಥಾನಕ್ಕೆ ಮೂಲಾಧಾರವೇ ಗುರುಸ್ಥಲ. ಜಂಗಮತ್ವ ಇದರಿಂದಲೇ ಶಾಖೋಪಶಾಖೆಗಳಾಗಿದೆ.

**ಪ್ರಶ್ನೆ:** "ಮಹಾ ಮಹೇಶ್ವರರ ಬರ್ಣಾಯಸವೇ ಭೋಗ ಮೋಕ್ಷ ಪರವಸ್ತುವು ಚಿತ್ರಪಟಾದಿವಾಘವಾ" ಎಂದು ಶತಕತ್ರಯದಲ್ಲಿ ಮಹಾಮಹೇಶ್ವರರೆಂದರೆ ಲಿಂಗವಂತರೆಂದೇ ಅರ್ಥವಲ್ಲದೆ, ಅಯ್ಯನವರೆಂದು ಯಾವ ಪಂಡಿತನೂ ತನ್ನ ಬುದ್ಧಿ ಶಕ್ತಿಯನ್ನು ಎಷ್ಟು ದುರುಪಯೋಗ ಮಾಡಿದರೂ ಅರ್ಥ ಮಾಡನು. ಯಾಕೆಂದರೆ ಅಯ್ಯನವರಿಗೆ ಮೋಕ್ಷವೆಂದು ಹೇಳಿದರೆ ಹಾಸ್ಯಾಸ್ಪದ.

**ಉತ್ತರ:**

ವಚನ: ಕನ್ನಡಿಯ ಹೊಳಪನ್ನು ಕಡಿಮೆಮಾಡಬೇಕೆಂದು ಕಣ್ಣೆಕಣ್ಣೆ ಬೂದಿಯಿಂ ಚಲ್ಲಿದರೆ ಆ ಕನ್ನಡಿಯ ಹೊಳಪು ಅಧಿಕವಾಗುವದಲ್ಲದೆ ಕಡಿಮೆಯಾಗ ಬಲ್ಲದೇನಯ್ಯಾ. ರನ್ನ-ಚಿನ್ನಗಳನ್ನು ಮಣ್ಣಿನಲ್ಲಿಟ್ಟರೆ ರನ್ನ-ಚಿನ್ನದ ಬಣ್ಣ ಅಧಿಕವಾಗುವದಲ್ಲದೆ ಕಡಿಮೆಯಾಗಬಲ್ಲದೇನಯ್ಯಾ! ಇದರಂತೆ ಚಿನ್ನಾದ ಗುರು ಜಂಗಮರಿಗೆ ಕುನ್ನಿಗಳಾದ ದುರ್ಜನರು ನಿಂದಿಸಲು

ಗುರುಜಂಗಮರ ಕೀರ್ತಿಯು ಅಧಿಕವಾಗುವವಲ್ಲವೆ ಕುಂದು ಬಾರ ದಯ್ಯಾ ! ಹೀಗೆಂದು ಸಾರಿದ ಶಿರಃಪುರದ ಶ್ರೀ ಗುರುಸಿದ್ಧರಾಮೇಶ್ವರಾ !!

ವಚ ಅಯ್ಯ ದೂರದಲ್ಲಿರ್ದ್ದಿಹೆಯೆಂದು ಬಾಯಾರಿ ಬಳಲುತ್ತಿದ್ದೆನಯ್ಯಾ ನಾನು ಅಯ್ಯಾ ! ಸಾರಿ ಬಂದು ನೀನೆನ್ನ ಕರಸ್ಥಲದಲ್ಲಿ ಮೂರ್ತಿಗೊಂಡರೆ ಇನ್ನು ಅರಿಕೆಯುಳ್ಳವ ಲಿಂಗ ಆಲಿ ನಿಮ್ಮಲ್ಲಿ ನೆಟ್ಟವು ನೋಡಯ್ಯ ಚೆನ್ನಮಲ್ಲಿಕಾರ್ಜುನಯ್ಯಾ !!

ವಚನ: ಅಯ್ಯ ಪಾತಾಳವಿತ್ತಿತ್ತ ಶ್ರೀಪಾದವತ್ತತ್ತ ! ಬ್ರಹ್ಮಾಂಡವಿತ್ತಿತ್ತ ಮಣಿಮಕುಟವತ್ತತ್ತ ! ಅಯ್ಯ ದಶದಿಕ್ಕು ಇತ್ತಿತ್ತ ದಶಭುಜಗಳ ತ್ತತ್ತ ! ಚನ್ನಮಲ್ಲಿಕಾರ್ಜುನಯ್ಯಾ ನೀನೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ !!

ಹೀಗೆ ' ಅಯ್ಯ ' ಶಬ್ದದ ಶ್ರೇಷ್ಠತ್ವವನ್ನು ಪ್ರಯೋಗಿಸಿರುವರು.

ಆ. ಮ. ಪಾಟೀಲರೇ ಅಯ್ಯನವರು, ಮಾಹೇಶ್ವರರೆಂಬ ಶಬ್ದ ಕೇಳದ ಕಿವುಡರೂ ಅಯ್ಯ ಶಬ್ದ ನುಡಿಯದ ಮೂಕರೂ ಜಂಗಮರ ಮಠವನ್ನು ಕಾಣದ ಕುರುಡರೂ ಆದ ನಿಮಗೆ ಮಾಹೇಶ್ವರರು ಅಯ್ಯನವರಲ್ಲವೆಂಬುದು " ಅಳಿಯ ನಲ್ಲ, ಮಗಳ ಗಂಡ " ನೆಂದು ಹೇಳುವವನಂತೆ ಅಯ್ಯ, ಮಾಹೇಶ್ವರ ಎಂಬ ಶಬ್ದವನ್ನು ನಾಶಗೊಳಿಸಬೇಕೆಂಬ ದುರಾಭಿಮಾನದ ಮಹತ್ವಾಕಾಂಕ್ಷೆಯು ಭ್ರಮಿಷ್ಠರಿಗೆ ಅರ್ಥವಾಗುವದಿಲ್ಲ. ಭಕ್ತಿ ಜ್ಞಾನವಿದ್ದವರಿಗೆ ಮಾತ್ರ ಸಹಜ ವಾಗಿ ಅರ್ಥವಾಗುತ್ತದೆ. ಗುರುಲಿಂಗಜಂಗಮರ ಸ್ಥಾನಮಾನಗಳನ್ನನುಸರಿಸಿ ಇವರಿಗೆ ಪೂಜ್ಯ ಸ್ಥಾನಗಳು ಯುಗಯುಗಾಂತರಗಳಿಂದ ವಂಶ ಪರಂಪರವಾಗಿ ಇರುವದು ಕಂಡು ಶಿವಶರಣೆ ಅಕ್ಕ ಮಹಾದೇವಿ ಹಾಡಿದ ವಚನ ನೋಡಿರಿ.

ವಚನ: ಅರಿವು ಸಾಧ್ಯವಾಯಿತೆಂದು ಗುರು ಲಿಂಗ ಜಂಗಮವ ಬಿಡಬಹುದೇ ? ಸಂದು ಸಂಶಯವಳಿದು ಅಂಖಡ ಜ್ಞಾನವಾಯಿತೆಂದು ಪರ ಧನ ಪರಸ್ತ್ರೀಗೆ ಯಳುಸಬಹುದೇ ? ಯತ್ರ ಜೀವಸ್ತತ್ರ ಶಿವಃ ಎಂಬ ಅಭಿನ್ನ ಜ್ಞಾನವಾಯಿತ್ತೆಂದು ಶುನಕ, ಸೂಕರ, ಕುಕ್ಕುಟ, ಮಾರ್ಜಾಲಗಳ ಕೂಡ ಭುಂಜಿಸಬಹುದೇ ? ಭಾವದಲ್ಲಿ ತನ್ನ ನಿಜದ ನೆಲೆಯನರಿವುತ್ತಿಹುದು ಸುಜ್ಞಾನ ಸತ್ಕ್ರಿಯ ಸುನೀತಿ ಸುಮಾರ್ಗ

ದಲ್ಲಿ ವರ್ತಿಸುವದು ಹೀಗಲ್ಲದೇ ಜ್ಞಾನವಾಯಿತ್ತೆಂದು ತನ್ನ ಮನಕ್ಕೆ ಬಂದ ಹಾಗೆ ಮೀರಿ ನಡೆದು ನಡೆವನಾದೊಡೆ ಶ್ವಾನಗರ್ಭದಲ್ಲಿ ಹುಟ್ಟಿ ಸವೆ ಬಿಡುವನೇ? ಚೆನ್ನಮಲ್ಲಿಕಾರ್ಜುನಯ್ಯನು ||

ವಚನ: ನವಲಾಡಿತ್ತೆಂದು ಕೆಂಬೂತ ಪಕ್ಕವ ತೆರೆಕೊಂಡಂತೆ। ಹುಲಿಯ ಬಣ್ಣಕ್ಕೆ ನರಿ ಮೈ ಸುಟ್ಟುಕೊಂಡಂತೆ। ಕೋಗಿಲೆ ಸ್ವರಗೈದಿತ್ತೆಂದು ಕಾಗೆ ಕರೆದಂತೆ। ಗುರುಲಿಂಗಜಂಗಮ ನಿಷ್ಠರಾಗಿ ವಚನವ ಹಾಡಿದರೆ ಒಪ್ಪುವರಲ್ಲದೆ। ಗುರುಲಿಂಗಜಂಗಮ ನಿಷ್ಠಾಹೀನರು ಓದಿ ಹಾಡಿದರೆ। ನಕ್ಕಿಗುಳ್ಳೆಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬಗೆದಂತೆ। ಏನೊಂದು ಪಾಟಿ ಮಾಡಿರಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ ||

ಈ ಪ್ರಕಾರ ಹಾಡಿದ್ದರೂ ಈ ಕುಲನಾಶಕರು ಅಯ್ಯ ಕುಲ ಶ್ರೇಷ್ಠತ್ವದ ಪ್ರಕಾಶವನ್ನು ಕಾಣದ ಅಂಧಕರೇ ಸರಿ.

**ಪ್ರಶ್ನೆ:** ಭಕ್ತರ ಹಣದಿಂದಲೇ ಸಂಸ್ಥೆಗಳನ್ನು ಕಟ್ಟಿ, ಆ ಭಕ್ತ ಬಂಧುಗಳನ್ನೇ ಧರ್ಮವಿದ್ಯೆಯಿಂದ ದೂರಿರಿಸುವದೆಂದರೆ ಮಹಾ ಅಪರಾಧವಲ್ಲವೇ? ಮತ್ತು ರಕ್ತಬಂಧುಗಳು ಮೆಚ್ಚುವ ಕಾರ್ಯ ಮಾಡಿ ಧರ್ಮಗ್ಲಾನಿಯನ್ನು ಮಾಡಕೂಡದು.

**ಉತ್ತರ:** ಆ. ಮ. ಪಾಟೀಲರೇ, ನೀವು ವೀರಶೈವ ಧರ್ಮದವರಲ್ಲವೆಂದು ಕಾಣುತ್ತದೆ. ಯಾಕಂದರೆ ವೀರಶೈವ ಮತ ಧರ್ಮ ಗುರುಗಳಾದ ಪಟ್ಟ ಚರ ಮೂರ್ತಿಗಳು, ಷಟಸ್ಥಲ ಜಂಗಮ ಮೂರ್ತಿಗಳು ಧರ್ಮ ಸಂಸ್ಥೆಗಳನ್ನು ಕಟ್ಟಿ ಬೇಕಾದರೆ ತಮ್ಮ ಮಕ್ಕಳ ಸಲುವಾಗಿ ಯಾರೂ ಕಟ್ಟಿಲ್ಲ. ಭಕ್ತಾದಿಗಳ ಮಕ್ಕಳ ಸಲುವಾಗಿ, ಹಗಲು ಇರುಳು ದುಡಿದು ಶ್ರಮಪಟ್ಟು, ತಮ್ಮ ತಪಃಸಾಮರ್ಥ್ಯ ದಿಂದ ಶ್ರೀ. ಮನ್ನಿರಂಜನ ಪ್ರಣವ ಸ್ವರೂಪಿಗಳಾದ ಶ್ರೀ ಮೃತ್ಯುಂಜಯ ಸ್ವಾಮಿಗಳು ಧಾರವಾಡ ಇವರು ಉಚಿತ ಪ್ರಸಾದ ನಿಲಯವನ್ನು ಸ್ಥಾಪಿಸಿದ್ದಾರೆ. ಇದು ಭಕ್ತಾದಿಗಳು ಅರಿಯದ ಮಾತಲ್ಲ. ಇದರಂತೆ ಬೆಳಗಾವಿಯಲ್ಲಿ ಶ್ರೀ. ಮ. ನಿ. ನಾಗನೂರ ಸ್ವಾಮಿಗಳೂ ಗೋಕಾಕದಲ್ಲಿ ಶ್ರೀ. ಮ. ನಿ. ದುರದುಂಡೇಶ್ವರ ಸ್ವಾಮಿಗಳೂ ಹೊಸಕಟ್ಟಿ (ಬೆಳಗಾಂವಿ)ಯಲ್ಲಿ ಹೂಲಿ ಪೂಜ್ಯ ಚರಮೂರ್ತಿಗಳೂ ಬೈಲಹೊಂಗಲದಲ್ಲಿ ಶ್ರೀ ಬೆತಸೂರ ಪಟ್ಟಾಧ್ಯಕ್ಷರೂ

ರಾಮದುರ್ಗದಲ್ಲಿ ಶ್ರೀ. ಮ. ನಿ. ಶಿರಾಳಸ್ವಾಮಿಗಳು ಅಪರಾದಿ ಅವರೂ ಸೂರೇಬಾನದಲ್ಲಿ ಶ್ರೀ. ಮ. ಚ. ಚರಪಟ್ಟಾಧ್ಯಕ್ಷರು ತೊಂಗಲ್ ಇವರೂ ನವಿಲಗುಂದದಲ್ಲಿ ಶ್ರೀ. ಮ. ನಿ. ಪ್ರ. ಗವಿಮಠ ಸ್ವಾಮಿಗಳವರೂ ಹುಬ್ಬಳ್ಳಿ ಯಲ್ಲಿ ಶ್ರೀ. ಮನ್ನಿರಂಜನ ಗುರುಸಿದ್ಧರಾಜೇಂದ್ರ ಮಹಾ ಸ್ವಾಮಿಗಳೂ ಹೋಳೀ ಸ್ವಾಮಿಗಳೂ ಸವದತ್ತಿ ಶ್ರೀ. ಮ. ನಿ. ಕಲ್ಮಠ ಮಹಾಲಿಂಗ ಸ್ವಾಮಿಗಳೂ ಕೊಪ್ಪಳ ಗವಿ ಸ್ವಾಮಿಗಳೂ ಶ್ರೀ. ಮುಂಡರಗಿ ಅನ್ನದಾನ ಮಹಾ ಸ್ವಾಮಿಗಳೂ ಶ್ರೀ. ಸಿದ್ಧಗಂಗಾ ಮಹಾ ಸ್ವಾಮಿಗಳೂ ಬೆಂಗಳೂರ ಸರ್ಪ ಭೂಷಣ ಸ್ವಾಮಿಗಳೂ ಸತ್ತೂರ ಶಿವರಾತ್ರಿ ಸ್ವಾಮಿಗಳೂ ಹಾಲಕೇರಿ ಅನ್ನದಾನ ಮಹಾ ಸ್ವಾಮಿಗಳೂ ಗದಗಿನ ತೋಂಟದಾರ್ಯ ಮಹಾ ಸ್ವಾಮಿ ಗಳೂ ಸ್ಥಾಪಿಸಿರುವ ಎಷ್ಟೋ ಪ್ರಸಾದ ನಿಲಯಗಳು, ಭಕ್ತರ ಮಕ್ಕಳ ವಿದ್ಯಾ ಭ್ಯಾಸ ಸಲುವಾಗಿ ಇರುವವಲ್ಲವೆ, ಶ್ರೀ. ಮ. ನಿ. ಬಂಥನಾಳ ಶಿವಯೋಗಿಗಳು ವಿಜಾಪೂರದಲ್ಲಿ ಸ್ಥಾಪಿಸಲ್ಪಟ್ಟ ಹಾಯಸ್ಕೂಲ ಕಾಲೇಜದಂಥ ಎಷ್ಟೋ ವಿದ್ಯಾ ಸಂಸ್ಥೆಗಳನ್ನು ಎಷ್ಟೋ ಮಹಾ ಸ್ವಾಮಿಗಳು ಅನಂತ ಕಡೆಗೆ ಭಕ್ತಾದಿಗಳ ಉದ್ಧಾರಕ್ಕಾಗಿ ಇವೆ ಎಂಬುದು ಸ್ವಾರ್ಥಾಭಿಮಾನಾಂಧರಾದ ನಿಮಗೆ ಕಾಣ ದೆ ಇರುವದು ಶೋಚನೀಯವೇ ಸರಿ.

ಷಟ್‌ಸ್ಥಲದ ಮಹಾ ಮೂರ್ತಿಗಳೇ ಆಗಲಿ, ಚರಸ್ಥಲದ ಚರ, ಪಟ್ಟ ಮಹಾ ಮೂರ್ತಿಗಳೇ ಆಗಲಿ ಇವರು ಬರೇ ರಕ್ತ ಬಂಧುಗಳ ಕಾರ್ಯಮಾಡಿ ಧರ್ಮಗ್ಲಾನಿಯನ್ನು ಮಾಡುವವರಲ್ಲ. ಇವರು ಅನುಮಿತ್ತ ಬಾಂಧವರಾದ್ದರಿಂದ ಒಂದನೆಯದು ರಕ್ತ ಬಾಂಧವ್ಯ, ಎರಡನೆಯದು ವೃತ್ತಿ ಬಾಂಧವ್ಯ, ಮೂರನೆ ಯದು ಭಾವ ಸಂಬಂಧವೆಂಬ ಮೂರು ಬಗೆಯ ಸಂಬಂಧಗಳಿರುವವು. ಒಂದ ನೆಯ ಪಿತಾ ಪುತ್ರಾದಿ ಬಂಧು ಬಾಂಧವರೊಳಗಿನ ಸಂಬಂಧವು ರಕ್ತ ಸಂಬಂಧ ವೆನಿಸುವದು. ಎರಡನೆಯದು ಗುರು ಶಿಷ್ಯಾದಿ ಇಷ್ಟಮಿತ್ರರೊಳಗಿನ ಸಂಬಂಧವು ವೃತ್ತಿ ಸಂಬಂಧವೆನಿಸುವದು. ಮೂರನೆಯದು ಭಾವ ಸಂಬಂಧ ಬರೇ ಮನುಷ್ಯ ಕೋಟಿಯಷ್ಟೇ ಏಕೆ? ಪ್ರಾಣಿ ಕೋಟಿಗಳೆಲ್ಲವೂ ಆತ್ಮ ರೂಪವಾಗಿರುವದ ರಿಂದ ಅಥವಾ ಒಬ್ಬ ದೇವರಿಗೆ ಸಂಬಂಧಪಟ್ಟವರಿರುವದರಿಂದ ಸರ್ವತ್ರ ಆತ್ಮ ಭಾವವನ್ನು ಅಥವಾ ದೈವೀ ಸಂಬಂಧ ಜ್ಞಾನವನ್ನು ವಹಿಸುವದು ಭಾವ ಸಂಬಂಧವೆನಿಸುವದು. ಪಾಟೀಲರೇ, ಆತ್ಮ ದೃಷ್ಟಿಯಿಂದ ಅಥವಾ ದೈವ

ಸಂಬಂಧ ದೃಷ್ಟಿಯಿಂದ ಸಕಲರೂ ಒಂದೇ ಎಂದು ಭಿನ್ನಭೇದವಿಲ್ಲದೆ ಈ ಧರ್ಮ ಪೀಠಗಳಲ್ಲಿ ಭಕ್ತಾದಿ ವಿದ್ಯಾರ್ಥಿಗಳಿಗೆ ಅನ್ನಕೊಡುವ ಆತ್ಮ ಜ್ಯೋತಿಯ ಶಕ್ತಿ ಪ್ರಜ್ವಲಿಸುವ ದೈವೀ ಸಂಪತ್ತಿಯ ಕೀರ್ತಿ ಪ್ರಕಾರಕ್ಕೆ ಸಹಿಸದ ದುರಾಭಿ ಮಾನಿಗಳಲ್ಲದೇ ಮತ್ತೇನು?

**ಪ್ರಶ್ನೆ:** "ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ" ಅಂದರೆ ಶಿವಯೋಗಿಯು ತೃಪ್ತನಾದರೆ ಶಿವನು ತೃಪ್ತಿ ಆಗುವನೆಂಬ ಸ್ತೋತ್ರದಲ್ಲಿ ಶಿವ ಯೋಗಿ ಅಂದರೆ ಲಿಂಗಾಂಗಿಯು ಲಿಂಗಭಕ್ತನು ಅನೇಕರು ಹಾಗೆ ತಿಳಿದಿಲ್ಲ. ಜಗದ್ಗುರು ತೋಂಟದಾರ್ಯ ವಿರಚಿತ ಸಿದ್ಧೇಶ್ವರ ಪುರಾಣದ ೨೭ನೇ ಸಂಧಿ ಯಲ್ಲಿ ಕಾಣಬಹುದು. ಅದು ಹೇಗೆಂದರೆ "ಮುಂದಣೊಳು ನೈವೇದ್ಯವಿದೆ ನೋಡುತಿರ್ದೆನದ । ನುಂಬುವದಿಲ್ಲಂ ಸ್ವೀಕೃತವದಾಗದೆನ್ನಿಂದ । ಪೊಂಬಡಿಯ ಕೇಳು? ಭಕ್ತನ ನಾಲಿಗೆಯ ತುದಿಯೊಳಾರಸವನನುಭವಿಸೆನು । ಕುಂದಿಸಿ ಅರಿಯುವರ್ಲೇ ತಥ್ಯವೆಂದ ಬಸೊದನೇ । ಅಂಬಿಕಾವಲ್ಲಭಂ ತಾಗೊದಿದನಾಗಿ ನಲುಬಿಂ ಭಕ್ತನೇ ಘನವೆನುತ್ತಿ ನಿಗಮಾಗಮಂಗಳು ಪೇಳುತಿರ್ಪವಲಂ!

ಅಂದರೆ ಶಿವನು ಬ್ರಹ್ಮನಿಗೆ ಹೀಗೆ ಅನ್ನುತ್ತಾನೆ. ಮುಂದೆ ನೈವೇದ್ಯ ವಿಟ್ಟರೆ ನಾನದನ್ನು ನೋಡುತ್ತಿರುವೆನಲ್ಲದೇ ಉಣ್ಣುವದಿಲ್ಲ. ಅದು ಸ್ವೀಕಾರ ವಾಗದು. ಭಕ್ತನ ನಾಲಿಗೆಯ ಮುಖಾಂತರ ಅದರ ರಸವನ್ನನುಭವಿಸು ವೆನು. ಜಗಜ್ಜಾಹೀರವಾಗಿ ಅದೆ; ಇದೇ ಸತ್ಯ. ಭಕ್ತನೇ ಶ್ರೇಷ್ಠನೆಂದು ವೇದಾಗಮಗಳು ನಿಶ್ಚಯವಾಗಿ ಸಾರುತ್ತವೆ. ಅಂತಾ ಬರೆದಿರುವಿರಿ.

**ಉತ್ತರ:** ಶ್ರೀ. ಮ. ಪಾಟೀಲರೇ, ವೀರಶೈವ ಶಾಸ್ತ್ರಗಳ ಅಭಿಪ್ರಾಯದ ಶಿವಯೋಗಿ ಶಬ್ದವನ್ನು ತಲೆ ಕೆಳಗೆಮಾಡಿ ಲಿಂಗಾಂಗಿಗಳನ್ನು ಅಡ್ಡದಾರಿಗೆ ಎಳೆದೊಯ್ಯುವದು ಸರ್ವಥಾ ಯೋಗ್ಯವಲ್ಲ. ಉಪಕ್ರಮಕ್ಕೆ ವಿರುದ್ಧವಾಗಿ ಅರ್ಥ ಮಾಡುವದಾದರೆ, ಮೈಗೆ ಸರಿಯಾಗಿ ಅಂಗಿಯನ್ನು ಹೊಲಿಸುವದು ಬಿಟ್ಟು, ಅಂಗಿಗೆ ಸರಿಯಾಗಿ ಮೈಯನ್ನು ತಿದ್ದಿಸಿಕೊಳ್ಳಲು ಹೊರಟಿರುವವನಂತೆ ಹಾಸ್ಯಾಸ್ಪದವಾಗುತ್ತದೆ.

ಶ್ಲೋಕ: ಯೇಪಶ್ಯಂತಿ ಜಗಜ್ಜಾಲಂ ಚಿದ್ರೂಪಂ ಶಿವಯೋಗತಃ । ನಿರ್ಧೂತ ಮಲ
ಸಂಸ್ಪರ್ಶಾಸ್ತೇ ಸ್ಮೃತಾಶ್ಶಿವಯೋಗಿನಃ ॥ ಘೋರ ಸಂಸಾರ ತಿಮಿರ ಪರಿ
ಧ್ವಂಸನ ಕಾರಣಂ । ಯೇಷಾ ಮಸ್ತಿ ಶಿವಜ್ಞಾನಂ ತೇಮತಾಶ್ಶಿವಯೋಗಿನಃ ॥

ಯಾರು ಶಿವಯೋಗದಿಂದ ಪ್ರಪಂಚ ಸಮುದಾಯವನ್ನು ಶಿವಸ್ವರೂಪ ನ್ನಾಗಿ ನೋಡುವರೋ ಅವರು ಆಣವಾದಿ ಮಲತ್ರಯಗಳ ಸೋಂಕಿಲ್ಲದವರಾಗಿ ಶಿವಯೋಗಿಗಳೆಂದು ಹೇಳಲ್ಪಡುವರು.

ಶ್ಲೋಕ: ಸ್ಥಾವರಾರ್ಪಿತ ನೈವೇದ್ಯಂ ನಚತೃ ಮಹೇಶ್ವರಿ।
ಜಂಗಮಾರ್ಪಿತ ನೈವೇದ್ಯಾದಹಂ ತೃಪ್ತೋವರಾನನೆ ॥

ಸ್ಥಾವರ ಲಿಂಗದ ಮುಂದಿಟ್ಟ ನೈವೇದ್ಯವನ್ನು ಭಕ್ತನು ಅದನ್ನು ಸ್ವೀಕರಿ ಸುವದು ಬರೋಬರಿ. ಈ ಪ್ರಸಾದ ಜಂಗಮಕ್ಕೆ ಬರುವದಿಲ್ಲೆಂದು ಬರೆದಿರುವದು ಬರೋಬರಿ ಅದೆ. ಆದರೆ ನಿಮಗೆ ಶಿವಯೋಗಿ ಅನ್ನುವೆ ಅಯ್ಯನಗೌಡನೆಂದು ಏಕೆ ಅನ್ನುವರು? ಈ ಶಿವಯೋಗಿ ಶಬ್ದವನ್ನು ಜಗ್ಗಾಡಿ ಭಕ್ತನಿಗೆ ಹಚ್ಚುವದು ಮೂರ್ಖತನವೇ ಸರಿ.

ಶ್ಲೋಕ: ಸಮಾಶತ್ರೌಚ ಮಿತ್ರೇಚ ಸಾಕ್ಷಾತ್ಕೃತ ಶಿವಾತ್ಮಕಃ। ನಿಸ್ಪೃಹಾ ನಿರಹಂಕಾರಾ ವರ್ತಂತೆ ಶಿವಯೋಗಿನಃ। ಪಾದಾಗ್ರ ರೇಣುವೋಯತ್ರ ಪತಂತಿ ಶಿವ ಯೋಗಿನಾಂ। ತದೇವಸದನಂ ಪುಣ್ಯಪಾವನಂ ಗೃಹಮೇಧಿನಾಂ। ಸರ್ವ ಸಿದ್ಧಿ ಕರಂ ಪುಂಸಾಂ ದರ್ಶನಂ ಶಿವಯೋಗಿನಾಂ। ಸ್ಪರ್ಶನಂ ಪಾಪಶಯನಂ ಪೂಜನಂ ಮುಕ್ತಿಸಾಧನಂ। ಮಹತಾಂ ಶಿವತಾತ್ಪರ್ಯ ವೇಧಿನಾಮನು ವೇದಿನಾಂ। ಕಿಂವಾಫಲಂ ನ ಸಿದ್ಧೇತ್ ಸಂಪರ್ಕಾಚ್ಛಿವಯೋಗಿನಾಂ। ದುರ್ಲ ಭಂವಾ ಶಿವಜ್ಞಾನಂ ದುರ್ಲಭಂ ಶಿವಚಿಂತನಂ ಯೇಷಾ ಮೇತದ್ವಯಂ ಚಾಸ್ತಿ ತೇಹಿ ಸಾಕ್ಷಾಚ್ಛಿವಾತ್ಮಕಾಃ॥

ಇತ್ಯಾದಿ ಅನೇಕ ಪ್ರಮಾಣಗಳಿಂದ ಶಿವಯೋಗಿ ಷಟಸ್ಥಲ ಬ್ರಹ್ಮಿ, ಅತಿವರ್ಣಾಶ್ರಮಿ ಎಂಬ ಪರ್ಯಾಯ ನಾಮವುಳ್ಳ ಜಂಗಮನು ಅಪರೋಕ್ಷ ಶಿವನೇ ಆಗಿರುವದರಿಂದ ಲಿಂಗಾಂಗಿಗಳಾದ ಭಕ್ತರಿಗೆ ಪ್ರತಿನಿತ್ಯದಲ್ಲಿ ಇಂಥ ಶಿವಯೋಗಿಯು ಸಿಗುವದು ಸಾಧ್ಯವಿಲ್ಲ. ಭಕ್ತರ ಸಂಸ್ಕೃತ ಪರಿಪಾಕ ವಶದಿಂದ ತಾದೃತ ಜಂಗಮ ದೊರೆಯುವದು ದುರ್ಲಭ. ಈ ವಿಧವಾದ ಜಂಗಮನು ಅಪ್ರಾರ್ಥಿತವಾಗಿ ಒಂದು ಕ್ಷಣಕಾಲ ದರ್ಶನವಾಗಿ ಆತನ ಆತಿಥ್ಯವು ಲಭಿಸು ವಲ್ಲಿ ತಾವನ್ಮಾತ್ರದಿಂದ ಭಕ್ತನ ಅವಿದ್ಯಾ ದೋಷಗಳೆಲ್ಲವು ನಷ್ಟವಾಗಿ ಮುಕ್ತಿ ಎಂಬುದು ಸಿದ್ಧಿಸಿ, ಭವರೋಗ ತೊಲಗುವದೆಂದು ಶಾಸ್ತ್ರವು ಘಂಟಾ ಘೋಷ ವಾಗಿ ಸಾರಿದ್ದು, ಇಂಥ ಶಿವಯೋಗಿಯನ್ನು ತೃಪ್ತಿಪಡಿಸಿದರೆ ಶಿವನು ತೃಪ್ತಿ ಆಗುವನೆಂದು ಬಸವಾದಿ ಪ್ರಮಥರು ವಚನ ಹೀಗೆ ಹಾಡಿರುವರು. ನೋಡಿರಿ.

ವಚನ: ಮರಕ್ಕೆ ಬಾಯಿ ಬೇರು ಎಂದು ತಳಕ್ಕೆ ನೀರೆರೆದರೆ ಪಲ್ಲವಿಸಿತ್ತು ನೋಡಾ ! ಲಿಂಗದ ಬಾಯಿ ಜಂಗಮನೆಂದು ಪಡಿಪದಾರ್ಥವ ನೀಡಿದರೆ ಮುಂದೆ ಸಕಲ ಪದಾರ್ಥವನೀವನು । ಜಂಗಮ ಹರನೆಂದು ಭಾವಿಸಿ ಕಂಡು ನರನೆಂದು ಭಾವಿಸಿದರೆ ನರಕ ತಪ್ಪದು ಕಾಣಾ ಕೂಡಲ ಸಂಗಮದೇವಾ ॥

ಭಕ್ತನು ತೃಪ್ತಿಯಾದರೆ ಶಿವನು ತೃಪ್ತಿಯಾಗುವನೆಂದು ಬಸವೇಶ್ವರನು ಯಾವ ವಚನದಲ್ಲಿಯೂ ಹೇಳಿಲ್ಲ. ಅಂದಬಳಿಕ ನೀನು ಶಿವಯೋಗಿಗೇ ಭಕ್ತನೆಂದು ಹೇಳುವದು ಸಮಂಜಸವಲ್ಲ, ಇದು ನಿಮ್ಮ ಶುದ್ಧ ಮೂರ್ಖತನವೇ ಸರಿ.

ವಚನ: ಓಡೆತ್ತಬಲ್ಲದು ಅವಲಕ್ಕಿ ಸವಿಯ ! ಕೋಡಗಬಲ್ಲದೇ ಶಿಶಿಮಂಚದ ಸುಖವ ! ಕಾಗೆ ನಂದನ ಬನದೊಳಗಿದ್ದರೇನು ಕೋಗಿಲೆಯಾಗಬಲ್ಲದೇ ಹೇಳು ! ಕೊಳನ ಥಡದಲ್ಲೊಂದು ಬಕ ಕುಳಿತಿದ್ದರೇನು ಕಳಹಂಸನಾಗಬಲ್ಲದೇ ಕೂಡಲಸಂಗಮದೇವಾ ॥

ಎಂಬಂತೆ ನೀವು ಶಿವಯೋಗಿಗೆ ಲಿಂಗಾಂಗಿ ಭಕ್ತನೆಂದು ಹೇಳುವದು ಮೇಲಿನ ವಚನಂದಲ್ಲಿವೆ ನಿಸ್ಕ ಸ್ವಾರ್ಥದ ಭ್ರಮೆಯಂದೇ ತಿಳಿಯಿರಿ.

ಶ್ಲೋಕ: ಶಿವಯೋಗಿ ಗೃಹೇಯಸ್ಯ ಭಿಕ್ಷಾಂ ಗೃಹ್ಣಾತಿ ಸತ್ಕೃತಃ ।
ಕುಲಂ ಸಂತಾರ್ಯತೇ ತೇನ ಸಪ್ತಸಪ್ತಚ ॥

ಶಿವಯೋಗಿಯು ಯಾವನ ಮನೆಯಲ್ಲಿ ಸತ್ಕಾರವನ್ನು ಹೊಂದಿ ಭಿಕ್ಷೆವನ್ನು ಪರಿಗ್ರಹಿಸುವನೋ ಆತನಿಂದ ಇಪ್ಪತ್ತೊಂದು ಕುಲವು ಭವಸಮುದ್ರದಿಂದ ದಾಟಿಸಲ್ಪಡುವದೆಂದೂ "ಭಿಕ್ಷಾಮಾತ್ರ ಪ್ರದಾನೇನ ಶಾಂತಾಯ ಶಿವಯೋಗಿನೇ । ಯತ್ಫಲಂ ಲಭ್ಯತೇ ನೈತದ್ಯಜ್ಞ ಕೋಟಿ ಶತೈರಪಿ" ಶಾಂತ ಸ್ವಭಾವವುಳ್ಳ ಶಿವಯೋಗಿಗೆ ಒಂದು ತುತ್ತು ಮಾತ್ರ ಕೊಡುವದರಿಂದ ಯಾವ ಫಲವು ಲಭಿಸುತ್ತದೆಯೋ ಆ ಫಲವು ಕೋಟಿ ಯಜ್ಞಗಳನ್ನು ಮಾಡಿದರೂ ಲಭಿಸುವದಿಲ್ಲ. ಕ್ರಮವಾಗಿ ವೀರಾಗಮ, ಶಿವರಹಸ್ಯ ಮತ್ತು ಕಾಳಿಕಾ ಖಂಡಗಳಲ್ಲಿಯ ಶ್ಲೋಕಗಳನ್ನು ನೋಡಿರಿ.

ಶ್ಲೋಕ: ವಸ್ತ್ರ ಭೂಷಣ ಗಂಧಾರ್ಘ್ಯೈರ್ಧೂಪಂ ದೀಪಂಚ ತಾಂಬೂಲಂ ।
ಜಂಗಮೇನ ವಿನಾಭುಂಕ್ತೇ ಪ್ರಸಾದ ನಿಷ್ಫಲಂ ಭವೇತ್ ॥

ಶ್ಲೋಕ: ಷಡ್ರಸಾನಂಚ ಮೃಷ್ಟಾನ್ನಂ ಭುಂಕ್ತೇ ಜಂಗಮ ವರ್ಜಿತಃ ।
ಅಸಾಕ್ಷಿ ಜಂಗಮಂ ಕೃತ್ವಾ ರೌರವಂ ನರಕಂ ವ್ರಜೇತ್ ॥

ಶ್ಲೋಕ: ಗೃಹಂ ಕ್ಷೇತ್ರಂಚ ಧಾನ್ಯಂಚ ಗೋಕುಲಂ ಮಹಿಷಸ್ತಥಾ ।
ಜಗಮೋಚ್ಛಿಷ್ಟಂ ವಿನಾಭುಂಕ್ತೇ ಪ್ರಸಾದಂ ನಿಷ್ಫಲಂ ಭವೇತ್ ॥

ಎಂಬಂತೆ ನೀವು ಶಿವಯೋಗಿಗೆ ಲಿಂಗ ಭಕ್ತನೆಂದು ಹೇಳುವದು ನಿಮ್ಮ ಮೂರ್ಖತನ ಅಲ್ಲದೆ ಮತ್ತೇನು ?

**ಪ್ರಶ್ನೆ:** ಗಣಾರಾಧನೆ ಜಂಗಮಾರಾಧನೆ ಎಂದು ಕೇವಲ ವಿಶಿಷ್ಟ ಅಷ್ಟ ವರ್ಗವನ್ನೇ ತೃಪ್ತಿ ಪಡಿಸುವ ರೂಢಿ ಏಕೆ ಬಂತು ?

**ಉತ್ತರ:** ಇದನ್ನು ರೂಢಿಗೆ ತಂದವರು ಚರಪಟ್ಟ ಗುರುಸ್ಥಲದಯ್ಯನವರೂ ಅಲ್ಲ. ಷಟ್ಸ್ಥಲದ ಜಂಗಮರೂ ಅಲ್ಲ. ವೇದಾಗಮ ಪುರಾಣ ಇತಿಹಾಸ ಕಾಲಗಳಿಂದಲೂ ಗಣಾರಾಧನೆ ಜಂಗಮಾರಾಧನೆ ಎಂಬುದು ನಡೆದು ಬಂದಿರುತ್ತವೆ. ಅಂತೆಯೇ ಅದೇ ಆಧಾರದ ಪ್ರಕಾರ ಮಗ್ಗಿ ಮಾಯಿದೇವರ "ಶತಕತ್ರಯ"ದಲ್ಲಿ ಪದ್ಯಗಳನ್ನು ನೋಡಿರಿ. ಪುಟ ೧೦, ೧೧. ಪದ್ಯ ೧೨. ೧೩.

ಪದ್ಯ: ಪ್ರಾಣಮುಮಂ ಶರೀರಮುಮಂ ನರ್ಥಮುಮಂ ಗುರುಲಿಂಗಜಂಗಮ
ಶ್ರೇಣಿಗೆ ಕೊಟ್ಟು ತನ್ಮುಖ ಸಮಾಗತಿ ಶಾಂತಿಕರ ಪ್ರಸಾದಕ । ಲ್ಯಾಣ
ಸುಖ ಪ್ರಪೂರ್ಣ ಪರಿಣಾಮವನೈದಿದ ವರ್ಗೆ ನಿತ್ಯನಿ । ರ್ವಾಣ ಪದಂ
ಬಳಿಕ್ಕುಳಿದವರ್ಗೆ ಪರಿಭ್ರಮಣಂ ಶಿವಾಧವಾ ॥

ತಾತ್ಪರ್ಯ: ಗುರುವಿಗೆ ಶರೀರವನ್ನು, ಲಿಂಗಕ್ಕೆ ಪ್ರಾಣವನ್ನು, ಜಂಗಮಕ್ಕೆ ಧನವನ್ನು ಸಮರ್ಪಿಸಿ ಆ ತ್ರಿವಿಧ ಮೂರ್ತಿಗಳಿಂದ ಲಭ್ಯವಾದ ಜನನ-ಮರಣ ತಾಪವನ್ನು ಹೋಗಲಾಡಿಸುವ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಗಳನ್ನು ಅನುಭವಿಸುವ ಸೌಖ್ಯದಿಂದ ತುಂಬಿ, ಪರಿತೃಪ್ತರಾದ ಭಕ್ತರಿಗೆ ಅಳಿವಿಲ್ಲದ ಮುಕ್ತಿಯು ಲಭಿಸುವದು. ನಿಮ್ಮಂಥವರಿಗೆ ಮಾತ್ರ ಜನನ-ಮರಣಗಳ ರಾಟೆಯಲ್ಲಿ ಸುತ್ತುವಿಕೆಯು ತಪ್ಪುವದಿಲ್ಲ.

ಪದ್ಯ: ಕಿಂಕರಭಾವಮಂ ಬಲಿದು ಲಿಂಗಮುಖಂ ಚರ ಲಿಂಗವೆಂದು ನಿ । ಶ್ಯಂಕ
ತೆಯಿಂ ಸುವರ್ಣ ವಸನಾನ್ನ ಪುರಸ್ಸರವಸ್ತು ವಾಹನಾ । ಲಂಕರಣಗಳಂ
ಸಲೆ ಸಮರ್ಪಿಸಿ ವೀರಶಿವಾಗಮೋಕ್ತ ಚಿನ್ಹಾಂಕಿತರಾದವರ್ಗೆ ಮಣಿವಂ
ತುಟಿಪೀ ಭಕ್ತಿಪದಂ ಶಿವಾಧವಾ ॥

ತಾತ್ಪರ್ಯ: ಜಂಗಮವೇ ಲಿಂಗಕ್ಕೆ ಮುಖವೆಂದು ನಿಸ್ಸಂಶಯವಾಗಿ ತಿಳಿದು, ಅವರಲ್ಲಿ ಕಿಂಕರತ್ವವನ್ನು ಹೊಂದಿ, ಧನಕನಕ-ವಸ್ತುವಾಹನಾದಿಗಳನ್ನು ಅವರಿಗೆ ಸಮರ್ಪಿಸಿ, ವೀರಶೈವಾಗಮೋಕ್ತವಾದ ಲಕ್ಷಣಗಳಿಂದ ಕೂಡಿದ ಶಿವ ಯೋಗಿಗಳನ್ನು ಕಂಡಕೂಡಲೆ ನಮಸ್ಕರಿಸುವದೇ ಭಕ್ತಿಯ ಮಾರ್ಗವು ಎಂದು ಈ ಎರಡು ಪದ್ಯಗಳಲ್ಲಿ ಭಕ್ತನ ಮುಖ್ಯ ಲಕ್ಷಣಗಳನ್ನು ಹೇಳಿರುವದು.

ಹೀಗಿದ್ದು, ಶಿವಯೋಗಿಯನ್ನು ಭಕ್ತನಿಗೆ ಹಚ್ಚಿ ಬರೆದಿರುವ ನಿಮ್ಮ ಬುದ್ಧಿಯನ್ನು ನೋಡಿದರೆ, ಸ್ತ್ರೀಯರು ಧರಿಸುವ ಆಭರಣಗಳಲ್ಲಿ ಕಾಲೊಳಗೆ ಧರಿಸುವದನ್ನು ಮೂಗಿನಲ್ಲಿ ಧರಿಸಿದರೆ ಶೋಭಿಸುವದೇ? ಕೊರಳಲ್ಲಿ ಧರಿಸುವದನ್ನು ನಡಕ್ಕೆ ಅಥವಾ ಮೊಣಕಾಲಿಗೆ ಧರಿಸಿದರೆ ಶೋಭಿಸುವದೇ? ಹಿತ್ತಾಳಿಯನ್ನು ಬೆಳಗಿದರೆ ಬಂಗಾರವಾಗುವದೇ? ಇಲ್ಲ. ಅದರಂತೆ ನೀವು ಶಿವಯೋಗಿಯನ್ನು ಭಕ್ತನಿಗೆ ಹಚ್ಚಿರುವದು ಸ್ಥಾನಪಲ್ಲಟವಾಗುವದೆಂದರೆ ನೀವು ಗುರುಸ್ಥಲವನ್ನಡರ ಬೇಕೆಂಬ ನಿಮ್ಮ ಸ್ವಾರ್ಥದ ಮರಾಳಿಯಿಂದ ಏನು ಮಾಡಲಿಕ್ಕೂ ಹಿಂಜರಿಯು ವಂತೆ ಕಾಣಿಸುವದಿಲ್ಲ. ರಾಜನ ಉಪಪತ್ನಿ (ಹೆಂಗಸು) ಸುಂದರಿಯೂ ಸುಗುಣಿಯೂ ಇದ್ದರೆ ಅವಳನ್ನು ಪುಣ್ಯಾಹವಾಚನದಲ್ಲಿ ಕೂಡಿಸುವರೆ? ಪರಮಾತ್ಮನ ನಾಮಸ್ಮರಣೆ ಮಾಡುವ ನಾಲಿಗೆಯಿಂದ ಸತ್ಯವನ್ನು ಅಸತ್ಯವನ್ನಾಗಿ ಮಾಡುವ ನಿಮ್ಮ ನಾಲಿಗೆಗೆ ಏನನ್ನಬೇಕು? ಪರಮಾತ್ಮನ ಪೂಜೆ ಮಾಡುವ ಹಸ್ತದಿಂದ ಪ್ರಾಚೀನ ಗ್ರಂಥಗಳನ್ನು ತಿದ್ದಿ ಶಬ್ದವನ್ನು ಅಪಭ್ರಂಶ ಮಾಡಿ, ಮಾಡಬಾರದ ಕೃತ್ಯಗಳನ್ನು ಮಾಡಿ ಸಮಾಜದ ಹೃದಯವನ್ನು ಕಲುಷಿತಗೊಳಿಸುವ ಗುರುಸ್ಥಲ ನಿಂದಕರಾದ ನಿಮಗೆ ಕರ್ಮದ ಬಲ ಎಷ್ಟಿರುವದೆಂಬುದನ್ನು ವಾಚಕರೇ ಊಹಿಸಲಿ.

ಶರಣೆ ಅಕ್ಕಮಹಾದೇವಿ, ಶರಣ ಚವುಡಯ್ಯನವರ ಮತ್ತು ಮೈಲಾರ ಶರಣರ ವಚನಗಳನ್ನು ನೋಡಿರಿ.

ವಚನ: ಆಯತ ಸ್ವಾಯತ ಅನುಭಾವವ ನಾನೆತ್ತ ಬಲ್ಲೆನಯ್ಯಾ। ಗುರುಲಿಂಗ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನವನಿತ್ತ ಭಕ್ತರ ಭೃತ್ಯರ ಭೃತ್ಯರಿಗಳಾಗಿಪ್ಪೆನಯ್ಯಾ। ಚನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣರಲ್ಲದ ಅನ್ಯವ ತೋರದಿರಯ್ಯಾ ॥

ವಚನ: ಕೂಡಿದ ಧನವೆಲ್ಲವನು ಗುರುಲಿಂಗಜಂಗಮಕ್ಕೆ ದಾನ ಮಾಡದೆ ವಂಚನೆ ಮಾಡಿ ಒಳಗಿಟ್ಟುಕೊಂಡು ನೆಲವತೋಡಿ ಬಚ್ಚಿಟ್ಟುಕೊಂಡು ಹಲವು ತರವ ಆಭರಣಗಳನ್ನು ಮಾಡಿಸಿ ತನ್ನ ಹೆಂಡರು ಮಕ್ಕಳ ಕರ ಚರಣ ಉದರ ಕರ್ಣದೊಳಗಿಟ್ಟು ಮತ್ತಿಷ್ಟು ಬದಕಾಗಲೆಂದು ತನ್ನ ಕೈಯೊಳಗಿನ ಇಷ್ಟ ಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡುವ। ಲಿಂಗಪೂಜಕನ ಪರಿಯಂತೆಂದೊಡೆ ಆ ಭಕ್ತನ ಪಂಚಾಭಿಷೇಕದಿಂದ ಲಿಂಗಕ್ಕೆ ಮಜ್ಜನವ ನೀಡಿದರೆ ಲಿಂಗದ ಚಿತ್ತದಲ್ಲಿ ಸುಣ್ಣದ ಗತವನ್ನೆತ್ತಿ ಬಾಧಿಸಿದಂತಾಯಿತ್ತಯ್ಯಾ। ಆ ಭಕ್ತನು ಪನ್ನೀರಿನಿಂದ ಮಜ್ಜನವ ನೀಡಿದರೆ ಲಿಂಗದ ಚಿತ್ತದಲ್ಲಿ ಬೂದಿಯ ಬಕ್ಕಣ ಕಟ್ಟಿ ಬಾಧಿಸಿದಂತಾಯಿತ್ತಯ್ಯಾ। ಆ ಭಕ್ತನು ಗಂಧವ ಧರಿಸಿದರೆ ಲಿಂಗದ ಚಿತ್ತದಲ್ಲಿ ಚಂಡಿಟ್ಟು ಬಾಧಿಸಿದಂತಾಯಿತ್ತಯ್ಯಾ। ಆ ಭಕ್ತನು ಅಕ್ಷತೆಯ ಧರಿಸಿದರೆ ಲಿಂಗದ ಚಿತ್ತದಲ್ಲಿ ಕಲ್ಲು ಹೊರಿಸಿ ಬಾಧಿಸಿದಂತಾಯಿತ್ತಯ್ಯಾ। ಆ ಭಕ್ತನು ಪುಷ್ಪವ ಧರಿಸಿದರೆ ಲಿಂಗದ ಚಿತ್ತದಲ್ಲಿ ಬೆನ್ನ ಮೇಲೆ ಹೇರು ಹೊರಿಸಿದಂತಾಯಿತ್ತಯ್ಯಾ। ಆ ಭಕ್ತನು ಧೂಪವ ಬೀಸಿದರೆ ಲಿಂಗದ ಚಿತ್ತದಲ್ಲಿ ಅರ್ಲನ್ನಿಕ್ಕಿ ಬಾಧಿಸಿದಂತಾಯಿತ್ತಯ್ಯಾ। ಆ ಭಕ್ತನು ದೀಪಾರತಿಯನ್ನೆತ್ತಿದರೆ ಲಿಂಗದಲ್ಲಿ ಪಂಜುಗಳ್ಳರು ಬಂದು ಮೋರೆಯ ಸುಟ್ಟು ಬಾಧಿಸಿದಂತಾಯಿತ್ತಯ್ಯಾ। ಆ ಭಕ್ತನು ಸ್ತೋತ್ರ ಮಂತ್ರವ ನುಡಿದರೆ ಲಿಂಗದ ಚಿತ್ತದಲ್ಲಿ ಕರ್ಣದೊಳಗೆ ತೊನಿಸಿ ಹೊಕ್ಕು ಗೋಳಿಟ್ಟು ಬಾಧಿಸಿದಂತಾಯಿತ್ತಯ್ಯಾ। ಇಂತಪ್ಪ ಲಿಂಗಬಾಧಕರು ಲಿಂಗಪೂಜಕರೆನಿಸಬಹುದೇ? ಇದರಿಂಗಿತವು ನಿಜಭಾವವುಳ್ಳ ಶರಣರು ನೀವೇ ತಿಳಿದು ನೋಡೆಂದಾತ ನಮ್ಮ ಅಂಬಿಗರ ಚವುಡಯ್ಯಾ॥

ವಚನ: ಗುರುಲಿಂಗಜಂಗಮಕ್ಕೆ। ತಿರಿದು ಭಕ್ತಿಯ ಮಾಡಿ ಪರವನು ಕಾಂಬಾ।
ತುರನೇಸ್ವಯ ಜಂಗಮನೆಂದೊರೆದ ಶ್ರೀಗುರುವೇ ಕೃಪೆಯಾಗು॥
ತತ್ವಜ್ಞಾನವ ತನ್ನ ಭೃತ್ಯರಿಗೆ ಬೋಧಿಸುತ ಪೃಥ್ವಿಸಂಚರಕೆ।
ಕರ್ತಚರ ಜಂಗಮವೆಂದುತ್ತಮದ ಶ್ರೀಗುರುವೇ ಕೃಪೆಯಾಗು॥

ಬಸವಾದಿ ಪ್ರಮಥರೇ ಸನಾತನ ಗುರುಲಿಂಗಜಂಗಮಕ್ಕೆ ಮಹತ್ವ ಕೊಟ್ಟು ಶಿವನ ಪ್ರತಿನಿಧಿಗಳು ಇವರೇ ಎಂದು ತಿಳಿದು:

ವಚನ: ಶ್ರೀಗುರುಲಿಂಗಜಂಗಮಕ್ಕೆ ಅರ್ಚನೆ ಪೂಜನೆ ದಾಸೋಹವನು ಧರ್ಮವ ಕಾಮಿಸಿ ಮಾಡಿದೊಡೆ ಧರ್ಮ ಒಪ್ಪುದು । ಅರ್ಥವ ಕಾಮಿಸಿ ಮಾಡಿದೊಡೆ ಅರ್ಥ ಒಪ್ಪುದು । ಕಾಮವ ಕಾಮಿಸಿ ಮಾಡಿದೊಡೆ ಕಾಮ ಒಪ್ಪುದು । ಮೋಕ್ಷವ ಕಾಮಿಸಿ ಮಾಡಿದೊಡೆ ಮೋಕ್ಷ ಒಪ್ಪುದು । ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಪದಮಂ ಕಾಮಿಸಿ ಮಾಡಿದೊಡನೆ ಆ ಪದಗಳೊಪ್ಪುವವು । ಕಾಮಧೇನುವು ಕಾಮಿಸಿ ಮಾಡಿದೊಡೆ ಕಾಮಧೇನುವು ದೊರಕೊಂಬುವದು । ಕಲ್ಪತರು ಕಾಮಿಸಿ ಮಾಡಿದೊಡೆ ಆ ಕಲ್ಪತರು ದೊರಕೊಂಬುವದು । ಚಿಂತಾಮಣಿ ಕಾಮಿಸಿದೊಡೆ ಚಿಂತಾಮಣಿ ದೊರಕೊಂಬುದು । ಪರುಷ ಕಾಮಿಸಿ ಮಾಡಿದೊಡೆ ಪರುಷ ದೊರಕೊಂಬುವದು । ಆವದು ಕಾಮಿಸಿ ಮಾಡಿದೊಡೆ ಆ ಕಾಮಿಸಿದ ಫಲಗಳು ತಪ್ಪವು ಕೂಡಲಸಂಗಮ ದೇವ ಪ್ರಭುವಿನಾಣೆ ॥

ಹೀಗೆ ಆಣೆ ಮಾಡಿ ಬಸವಣ್ಣನವರು ಗುರುಲಿಂಗಜಂಗಮಕ್ಕೆ ತನು ಮನ ಧನವನ್ನರ್ಪಿಸಿರುವರು. ನೀವು ಹೇಳಿದಂತೆ ಭಕ್ತರ ಸಲುವಾಗಿ ಮಾತ್ರ ಅವರು ಹೇಳಿಲ್ಲ; ಹಾಗು ಲೋಕಾರೂಢಿಯೂ ಇಲ್ಲ. ಗುರುಲಿಂಗಜಂಗಮದಲ್ಲಿ ಭಾವಿಸಿದ್ದನ್ನು ಕೊಡುವ ಶಕ್ತಿಯನ್ನು ಕಂಡು ಹಿಡಿದು ತಾನು ಅವರಂತೆ ಆಚರಿಸಿದನು. ಭಕ್ತಾದಿಗಳು ತಮಗೆ ಬರುವ ಕಂಟಕಾದಿಗಳು ದೂರಾಗಿ ಧನ, ಕನಕ, ವಸ್ತ್ರ, ವಾಹನ, ಅಂದಣೈಶ್ವರ್ಯ ಅಭಿವೃದ್ಧಿಯಾಗಲೆಂದು ಭಾವಿಸಿ, ಗಣಾರಾಧನೆ ಮಾಡಬೇಕೆಂಬ ರೂಢಿ ಇಲ್ಲೀ ಪರ್ಯಂತರ ಅವ್ಯಾಹತವಾಗಿ ನಡೆದು ಬಂದಿದೆ.

ಸ್ಕಾಂದೋಪನಿಷತ್ತಿನಲ್ಲಿ "ದೇಹೋ ದೇವಾಲಯಃ ಪ್ರೋಕ್ತೋ । ಜೀವೋ ದೇವಸ್ಸದಾಶಿವಃ" ಎಂಬುದಾಗಿ ಹೇಳುವಂತೆ ಮನುಷ್ಯನ ದೇಹವು ಆದಿಯಲ್ಲಿ ಬ್ರಹ್ಮನಿರ್ಮಿತವೆನಿಸಿ, ವೈಖರೀರೂಪವಾಣಿಯುಕ್ತನಾಗಿಯೂ ಜ್ಞಾನಾಜ್ಞಾನವನ್ನರಿಯುವ ಸ್ಥಾನವಾಗಿಯೂ ಸೂಕ್ಷ್ಮವಾಗಿ ಸಕಲ ದೇವತೆಗಳ ವಾಹನವಾಗಿರುವದರಿಂದಲೂ ಪ್ರಥಮದಲ್ಲಿ ಸಗಣೋಪಾಸಕರಾದ ಜೀವರುಗಳು ಭಕ್ತಿಯನ್ನು ಮಾಡಿ ಇಷ್ಟಾರ್ಥ ಪಡೆಯಲು ಬ್ರಹ್ಮ ನಿರ್ಮಿತವಾದ ಈ ದೇಹದ ಆಕಾರದಂತೆಯೇ ದೇವಸ್ಥಾನದಲ್ಲಿಯ ಲಿಂಗ ವಿಗ್ರಹಾದಿ ದೇವತೆಗಳನ್ನು ವಿಷ್ಣುವಿನ ಅಂಶೀಭೂತರಾದ ವಿಶ್ವಕರ್ಮ ಮಯನೇ ಮೊದಲಾದ ಶಿಲ್ಪಜ್ಞಾನಿ

ಗಳಿಂದ ನಿರ್ಮಿಸಲ್ಪಟ್ಟ ಸ್ಥಾವರ ಲಿಂಗಗಳಿಗೆ ಮಂತ್ರಸಂಸ್ಕಾರ ಮಾಡಲ್ಪಟ್ಟದ್ದು ಸ್ಥಿರಲಿಂಗ. ಗುರುಗಳಿಂದ ದೀಕ್ಷಾಸಂಸ್ಕಾರ ಹೊಂದಿ ಷಟಸ್ಥಲ ಜ್ಞಾನೋಪದೇಶದಿಂದ ಸಂಚಾರ ಮಾಡುವದು ಚರಲಿಂಗ; ಹೀಗೆ ಎರಡು ಭೇದ ಮಾಡಿದ್ದಾರೆ. ಇದರಂತೆಯೇ ಶಿವನ ರೂಪವು ಎರಡು ಪ್ರಕಾರ.

ಶ್ಲೋಕ: ಲಿಂಗಂಚ ದ್ವಿವಿಧಂ ಪ್ರೋಕ್ತಂ ಜಂಗಮಾ ಜಂಗಮಾತ್ಮನಾ । ಅಜಂಗಮೇ ಯಥಾ ಭಕ್ತಿರ್ಜಂಗ ಮೇಚ ತಥಾ ಸ್ಮೃತಾ । ಅಜಂಗಮಂತು ಯಲ್ಲಿಂಗಂ ಮೃಚ್ಛಿಲಾದಿ ವಿನಿರ್ಮಿತಂ । ತದ್ವರಂ ಜಂಗಮಂ ಲಿಂಗಂ ಶಿವಯೋಗೀ ಶಿವಿಶ್ರುತಂ । ಆಚಾರೇ ಮಂತ್ರಸಂಸ್ಕಾರಾಲ್ಲಿಂಗೇ ವಸತಿ ಶಂಕರಂ । ಸದಾ ಕಾಲಂ ವಸತ್ಯೇವ ಚರಲಿಂಗೆ ಮಹೇಶ್ವರಃ ॥

ಶಿವನ ರೂಪವು ಚರವೆಂತಲೂ ಅಚರವೆಂತಲೂ ಎರಡು ವಿಧವಾಗಿರುವದು. ಮೃಚ್ಛಿಲಾ ರೂಪಗಳೇ ಅಚರ ರೂಪವು. ಶಿವಯೋಗಿಗಳ ರೂಪವೇ ಚರ ರೂಪವು. ಸ್ಥಾವರಲಿಂಗ ಮುಖಾಂತರ ಬಾಣಾಸುರ, ಸೌಂದರನಂಬಿ, ಕರಿಕಾಲಚೋಳ ಮುಂತಾದ ಶೈವಭಕ್ತರು "ಭಕ್ತಪ್ರಾಣ ಮಮಪ್ರಾಣಃ, ಭಕ್ತಾಂಗಂತು ಮಮಾಂಗಕಂ" ಎಂಬಂತೆ ಸ್ಥಾವರ ಲಿಂಗದ ಮುಂದಿಟ್ಟ ನೈವೇದ್ಯವನ್ನು ಮೇಲೆ ಹೇಳಿದ ನನ್ನ ಭಕ್ತರ ಮುಖಾಂತರ ಸ್ವೀಕರಿಸುವೆನೆಂದು ಶಿವನು ಬ್ರಹ್ಮನಿಗೆ ಹೇಳಿದ ಮಾತು ಶೈವ ಭಕ್ತಾದಿಗಳಿಗಲ್ಲದೆ, ವೀರಶೈವರಿಗಲ್ಲವೆಂಬುದು ನಿಮಗೆ ತಿಳಿಯದೆ ಶೈವನದು ವೀರಶೈವನಿಗೆ, ವೀರಶೈವನದು ಶೈವನಿಗೆ ಹೀಗೆ ಅರ್ಥವನ್ನು ಅನರ್ಥಮಾಡುವ ಅಂಗ್ಲ ಭಾಷೆಯನ್ನು ಓದಿದ ನಿಮಗೆ ಏನನ್ನಬೇಕೋ ವಾಚಕ ಮಹಾಶಯರೇ ವಿಚಾರಿಸಲಿ.

ವಚನ: ಜಂಗಮ ಲಿಂಗವ ನರ್ಚಿಸಿ ಪೂಜಿಸಿ ಪಾದೋದಕ ಪ್ರಸಾದವ ಕೊಂಬ ಸದ್ಭಕ್ತಂಗೆ ಗುರುವುಂಟು ಲಿಂಗವುಂಟು ಪಾದೋದಕವುಂಟು ಪ್ರಸಾದವುಂಟು ಸದ್ಭಕ್ತಿವುಂಟು ಆಚಾರವುಂಟು । ಈ ಕ್ರಮದಲ್ಲಿ ಜಂಗಮ ಲಿಂಗವನು ಅರ್ಚಿಸದೇ ತನ್ನ ಸಂಸಾರದೊಡನೆ ಒಡಲ ಹೊರುವವಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ಪಾದೋದಕವಿಲ್ಲ ಪ್ರಸಾದವಿಲ್ಲ । ಅವನು ಅವಿಚಾರಿ ಅವನು ಅಶ್ರೇಷ್ಠ ಅವನು ಅಪೂಜ್ಯ ಅವನು ಭವಿ ಅವನು ರೋಗಿ ಅವನು ದರ್ಪಕ ಪಂಚಮಹಾಪಾತಕನಯ್ಯಾ ಗೊಗ್ಗೇಶ್ವರಾ ॥

ಹೀಗೆ ಪ್ರಭುವೆ ಗುರುಲಿಂಗಜಂಗಮರಲ್ಲಿ ಭಕ್ತಿ ವಹಿಸಿ ಹಾಡಿರುವಲ್ಲಿ ಸನಾತನ ಗುರುಜಂಗಮರನ್ನು ತೆಗೆದುಹಾಕಿ ಸಂಸ್ಕಾರ ಮಾಡಿ ಹೊಸ ಗುರು ಜಂಗಮರನ್ನು ಮಾಡಿಕೊಳ್ಳುವದು ಲಗ್ನದ ಗಂಡನನ್ನು ಬಿಟ್ಟು ವ್ಯಭಿಚಾರಿ ಉಪಕಿ ಗಂಡನನ್ನು ಮಾಡಿಕೊಂಡಂತೆಯೇ ಸರಿ.

**ಪ್ರಶ್ನೆ:** ಶಿ. ಶ. ತಾಳೀಕೋಟಿ ಮಲ್ಲಿಕಾರ್ಜುನಪ್ಪನವರು ಹುಬ್ಬಳ್ಳಿಯಲ್ಲಿ ದಿನಾಂಕ ೪–೯–೧೯೩೬ಕ್ಕೆ ಹೊರಡಿಸಿದ ಪ್ರಕಟನೆಯ ಆಧಾರದಿಂದ, ನಿಮ್ಮ ಶರಣ ಸೇವಕ ಸಂಘದಿಂದ ಪ್ರಕಟನ (೩) ವೀರಶೈವ ಮಾತ್ರರೆಲ್ಲ ಗುರುಜಂಗ ಮಾಧಿಕಾರಿಗಳಿಗೆ ಅರ್ಹರು, ಭಕ್ತನೇ ಜಂಗಮಂ "ವೀರಶೈವಾಮೃತ ಪುರಾಣ" ದಲ್ಲಿ ಖಾಂಡ (೧) ಸಂಧಿ (೨) ಪದ್ಯ (೧೩) ಶಿವಭಕ್ತನೇ ಗುರುತ್ವನೆಂದೆನಿಸಿ ದನು. ವೀ. ಪು. ೧–೩–೩ "ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂದು ಬಸವೇ ಶ್ವರನು. "ಗುರುಲಿಂಗಜಂಗಮಾದಿ ಸರ್ವಕ್ಕೂ ಭಕ್ತನೇ ಆಧಾರ" ಎಂದು ಜಗದ್ಗುರು ತೋಂಟದ ಸಿದ್ಧೇಶ್ವರರು. ಭಕ್ತರಿಗೆ ತಾವು ಮಕ್ಕಳೆಂದು "ಮಗನ ತೂಗಿರೋ ಭಕ್ತರು" ಎಂದು ಮುಳಗುಂದ ಮಹಾಂತ ಶಿವಯೋಗಿಗಳೂ. ಲಿಂಗಧಾರಿಗಳೆಲ್ಲ ಲಿಂಗಸ್ವರೂಪರೆಂದು ಅನೇಕ ಶಿವಾನುಭವಿಗಳೂ ಬೋಧಿಸಿರು ವರು. ಆದರಂತೆ ಸಕಲ ಗುರುಜಂಗಮರು ಮೊದಲು ಭಕ್ತರೇ ಇದನ್ನೊಪ್ಪ ದವರು ವೀರಶೈವರಾಗರು. ಶ್ರೀ. ಎಡೆಯೂರ ಸಿದ್ಧಲಿಂಗೇಶ್ವರರು ಭಕ್ತರು, ಹುಬ್ಬಳ್ಳಿಯ ಮೂರುಸಾವಿರ ಮಠದ ಕರ್ತೃ ಜಗದ್ಗುರುಗಳು ಭಕ್ತರು (ಬಳ್ಳಾ ರಿಯ ದಿನಾಂಕ ೧೦–೯–೧೯೫೬ನೆಯ ನವಸಂದೇಶ ನೋಡಿರಿ). ಹೀಗಿರಲು ಮಧ್ಯಕಾಲದಲ್ಲಿ ಗುರುಗಳಾಗಿದ್ದ ಕೆಲವು ಭಕ್ತರು ವ್ರತಗೆಟ್ಟು ಪತಿತರಾಗಿ ಲಗ್ನ ವಾಗಿ ಮಕ್ಕಳನ್ನು ಹಡೆದು ತಮ್ಮ ಸ್ಥಾನಗಳಿಗೆ ತರಹತ್ತಿದರು; ಇದು ಅನುಚಿತ ಪದ್ಧತಿ. ಹೀಗೆ ಬೆಳೆದ ಸಂತಾನವನ್ನು ಗುರುವಂಶ, ಗುರುಕುಲ, ಜಂಗಮ ಕುಲವೆನ್ನಹತ್ತಿದರು. ಈ ರೂಢಿಯನ್ನು ಈಗಲೂ ಕಾಣಬಹುದು. ಅಂದ ಬಳಿಕ ಹೀಗೆ ವ್ರತಗೆಟ್ಟು ಬೆಳೆದ ಸಂತಾನವು ಗುರುಜಂಗಮರಾಗಲು ಅರ್ಹವೋ ? ಶುದ್ಧಾಚರಣವಲ್ಲಿ ನಡೆದ ಭಕ್ತವಂಶವು ಅರ್ಹವೋ ? ಸೂಜ್ಞರು ನಿರ್ವಿಕಾರ ದಿಂದ ವಿಚಾರಿಸಲಿ. ಗುರುಜಂಗಮ ಸ್ಥಾನಗಳಿಗೆ ಕುಲಗಳಿಲ್ಲ. ಬಸವ, ಚನ್ನ ಬಸವ, ಪ್ರಭುಗಳು ಯಾವ ಒಂದು ವಿಶೇಷ ಕುಲದವರು ? ಸಕಲ ಶಿವಭಕ್ತರ ಸಹಾಯದಿಂದ ಸ್ಥಾಪಿಸಲ್ಪಟ್ಟ ಶಿವಯೋಗಮಂದಿರದಲ್ಲಿ ಭಕ್ತ ವಟುಗಳನ್ನೇ

ನಿರಾಕರಿಸಿ ಮಧ್ಯ ಕಾಲದ ಕೃತ್ರಿಮ ವರ್ಗದವರನ್ನೇ ಆರಿಸಿ, ತೋರಿಕೆಯ ಧರ್ಮವಿದ್ಯೆಯನ್ನು ಕೊಟ್ಟು ಹಾಗು ಕಾಶಿಯಲ್ಲಿ ಕಾವ್ಯ, ವ್ಯಾಕರಣ, ತರ್ಕ ಹಾಗು ಶೈವ ಶಾಸ್ತ್ರಗಳನ್ನೋದಿಸಿ ಧರ್ಮ ಪೀಠಗಳಿಗೆ ತರಹತ್ತಿ ಸಮಾಜದ ಆಧಾರಸ್ತಂಭರಾದ ಭಕ್ತರನ್ನು ಬಿಟ್ಟಿದ್ದರಿಂದ ಬಹುದೊಡ್ಡದಾದ ಶುದ್ಧ ಭಕ್ತ ಸಮಾಜವು ಗುರುಜಂಗಮ ಸ್ಥಾನಗಳಲ್ಲಿ ನಾಮಶೇಷವಾಗಹತ್ತಿದೆ. ಇದು ಶಿವಯೋಗ ಮಾರ್ಗವೋ! ಕೆಲವರ ಭೋಗ ಮಾರ್ಗವೋ! ಈ ಮಹಾ ಪ್ರಮಾದವನ್ನು ತೀವ್ರ ತಿದ್ದಿಕೊಂಡು ಆ ಸಂಸ್ಥೆಯ ಕಲಂಕವನ್ನು ಈಗಿನ ಅವರ ಚಾಲಕರು ಕಳೆಯಲಿ. ಇಲ್ಲವೆ ವೀರಶೈವ ಮಹಾಸಭೆಯು ಸಮಾಜ ದುರಂಧರರು ಈ ಬಗ್ಗೆ ಅತ್ಯಾಸಕ್ತಿಯಿಂದ ಕಾರ್ಯತತ್ಪರರಾಗಲಿ. "ಶರಣ ರೊಳೆಸೆವಹುದೆಂದು ಬಣ್ಣಿಸುವ ವರ್ತನೆ"ಯು ಅಲ್ಲಿಯೂ ಎಲ್ಲೆಲ್ಲಿಯೂ ಉಂಟಾ ಗಲಿ. ಇಲ್ಲವಾದರೆ ಈ ಕೃತ್ರಿಮ ವರ್ಗದವರು ಹಲವರು ತಾವಾರೆಂದರಿಯದೆ ತಮ್ಮನ್ನು ಬ್ರಾಹ್ಮಣರೆಂದೂ ಇತರರು ಕ್ಷತ್ರಿಯ, ವೈಶ್ಯ, ಶೂದ್ರರೆಂದೂ ತಾವು ಜಾತರೆಂದೂ ಇತರರು ಅಜಾತರೆಂದೂ ತಾವೇ ಗುರುಜಂಗಮ ಸ್ಥಾನಗಳಿಗೆ ಸೂರ್ಯ–ಚಂದ್ರರಿರುವವರೆಗೆ ಇರಬೇಕೆಂದು ಗ್ರಂಥಗಳಲ್ಲಿ ಬರೆಯುತ್ತಲೂ ಪುರಾಣ, ಪ್ರವಚನ, ಕೀರ್ತನಗಳಲ್ಲಿ ಹೇಳುತ್ತಲೂ ನಡೆದಿರುವರು. ಇವನ್ನು ಸೂಜ್ಞರು ಖಂಡಿಸದೇ ಮೌನವಾಗಿರುವದು ಶೋಭಿಸದು. ಈ ಭಕ್ತಾಪರಾಧವು ದೂರಾಗಿ ಸಕಲರಿಗೂ ಸಮಾನಾವಕಾಶ ಒದಗಿ, ನಿಜವಾಗಿ ಬಸವಾನುಯಾಯಿ ಗಳಾಗಿ ಸಕಲರು ತಮ್ಮ ಆತ್ಮೋನ್ನತಿಯನ್ನು ಸಾಧಿಸಲಿ. ಹೀಗೆಂದು ಒಂದು ಜಾಹೀರಪ್ರಕಟನೆ ಹೊರಡಿಸಿರುವಿರಿ.

**ಉತ್ತರ:** ಈ ಎಲ್ಲ ಮೇಲ್ಕಂಡ ವಿಷಯಗಳಿಂದ ಕೂಡಿದ ಜಾಹೀರ ಪ್ರಕಟನೆಯಲ್ಲಿಯ ಪ್ರಶ್ನೆಗಳಿಗೆ ಸನಾತನ ವೀರಶೈವ ಧರ್ಮದವರ ಉತ್ತರ. ಭಕ್ತನೇ ಜಂಗಮ ಎಂಬ ವಿಷಯದ ಬಗ್ಗೆ ವೀರಶೈವಾಮೃತ ಪುರಾಣದ ಖಂಡ (೧), ಸಂಧಿ (೨), ಪದ್ಯ (೧೩) ನೋಡಿ, ಶಿವಭಕ್ತನೇ ಗುರುತ್ವನೆಂದೆನಿಸಿದ ನೆಂದು ಬರೆದಿರುವಿರಿ. ಹಾಗಾದರೆ ಅದೇ ಪುರಾಣದ ಖಂಡ ೧, ಸಂಧಿ ೧ ರಿಂದ ೭೦ನೇ ಪದ್ಯದ ವರೆಗೂ ಗುರುಜಂಗಮರ ವರ್ಣನೆಯ ಉತ್ಪತ್ತಿಯ ಪ್ರಾಶಸ್ತ್ಯತೆಯ ಲಕ್ಷಣಗಳನ್ನೊಳಗೊಂಡ ಮುಖ್ಯ ಪದ್ಯಗಳನ್ನು ಮರೆಮಾಜಿ, ಕಾಗೆಯು ಸರ್ವಾಂಗಸುಂದರವಾದ ಶರೀರವನ್ನು ಬಿಟ್ಟು ಕೇವಲ ಹುಣ್ಣನ್ನೇ

ಕುಕ್ಷಿವಂತೆ ಗುರುಜಂಗಮರಿಂದ ಭಕ್ತನು ಉದಯಿಸಿದನೆಂದು ಹೇಳುವ ಅದೇ ಪುರಾಣದಲ್ಲಿಯೇ ಆಗಮದ ಪ್ರಮಾಣಗಳ ಉದಾಹರಣೆಗಳನ್ನು ಅದೇ ಪುರಾಣದಲ್ಲಿ ಬರೆದ ಸಂಸ್ಕೃತ ಶ್ಲೋಕಗಳನ್ನೂ ಇಲ್ಲಿ ಉದಾಹರಿಸಿವೆ ನೋಡಿರಿ.

ಶ್ಲೋಕ: ಶಿವ ಏವ ಸಮುತ್ಪನ್ನ ಶ್ಶಿವ ಏವ ವಿಭೂಷಿತಃ ।
ಶಿವ ಏವ ಜಗತ್ಕರ್ತಾ ಜಂಗಮಶ್ಚ ಪ್ರಶಸ್ಯತೆ ॥ ೧೩ ॥
ಜಕಾರಾಜ್ಜನಿತಾ ಪೃಥ್ವೀಗಕಾರಾಕಾಶಮುದ್ಭವಂ ।
ಮಕಾರಾನ್ಮರ್ತ್ಯ ಲೋಕಶ್ಚ ಜಂಗಮೋ ಜಗದೀಶ್ವರಃ ॥ ೧೪ ॥
ಜಟಾಕರಸ್ಥಲೇ ಲಿಂಗಂ ಮುಖೇ ಪಂಚಾಕ್ಷರಾನ್ವಿತಂ ।
ವಿಭೂತಿ ಲೇಪನಂ ದೇಹೇಗಲೇ ರುದ್ರಾಕ್ಷ ಮಾಲಿಕಾ ॥ ೧೫ ॥
ಪ್ರಸನ್ನ ವದನಶ್ಯಾಂತಃ ಕರ್ಣಕುಂಡಲಂ ಮಂಡಿತಃ ।
ತೃಣೀಕೃತ ಜಗತ್ಸರ್ವಂ ಮಂದಸ್ಮಿತ ಮನೋಹರಃ ॥ ೧೬ ॥
ಸತ್ಸ್ವರೂಪಂ ಜಕಾರಂಚ ಚಿತ್ಸ್ವರೂಪಂ ಗಕಾರಕಂ ।
ಆನಂದತ್ವಂ ಮಕಾರಂಚ ನಿತ್ಯ ಮಾನೇನ ಜಂಗಮಂ ॥ ೧೭ ॥
ಜಕಾರಂ ಜನನಂ ನಾಸ್ತಿ ಗಕಾರಂ ಗಮನಂ ನಹಿ ।
ಮಕಾರಂ ಮರಣಂ ನಾಸ್ತಿ ತಸ್ಯ ಜಂಗಮ ಲಕ್ಷಣಂ ॥ ೧೮ ॥

ಶ್ಲೋಕ: ಲಲಾಟೆ ಲೋಚನಂ ಚಾದ್ರಿ ಕಲಾಮಪಿಚ ದೋರ್ದ್ವಯಂ ।
ಅಂತರ್ನಿಘಾಯ ವರ್ತೇಹಂ ಗುರುರೂಪೋ ಮಹೇಶ್ವರಿ ॥ ೧ ॥
ಯೋಗುರು ಸ್ಸ ಶಿವಃ ಪ್ರೋಕ್ತೋಯ ಶ್ಶಿವಸ್ಸಗುರುಸ್ಮೃತಃ ।
ಭಕ್ತಿಮುಕ್ತಿ ಪ್ರದಾತಾಯೋ ತಸ್ಮೈ ಶ್ರೀಗುರುವೇ ನಮಃ ॥ ೨ ॥
ಅಖಂಡ ಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಂ ।
ಜಗಚ್ಛಂತಿತ ಪಾದಾಯ ತಸ್ಮೈ ಶ್ರೀಗುರುವೇ ನಮಃ ॥ ೩ ॥

ಶ್ಲೋಕ: ಮನ್ನಾಥ ಶ್ರೀ ಜನನ್ನಾಥೋ ಮದ್ಗುರುಃ ।
ಸ್ವಾತ್ಮಾಚ ಸರ್ವಭೂತಾತ್ಮಾ ತಸ್ಮೈ ಶ್ರೀಗುರುವೇ ನಮಃ ॥

ಎಂದು ಹೇಳಿದ ಪ್ರಮಾಣಗಳನ್ನು ಕೈಸಂಧಿಯಲ್ಲಿ ಬಿಡುತ್ತ ಹೊರಟಿರುವ ನಿಮ್ಮ ಕುಚೋದ್ಯತನದ ಮಂತ್ರವಾದಿ ಗ್ರಂಥಕ್ಕೆ ಜ್ಞಾನಿಗಳು ಒಪ್ಪರು. ಗುರು ಜಂಗಮರ ಸೇವಾ ಶುಶ್ರೂಷೆಯನ್ನು ಮಾಡಿದ ಭಕ್ತನನ್ನು ಕೊಂಡಾಡಿದರೆ, ಭಕ್ತನು ಗುರುವಾದಂತಾಯಿತೇ? ತಾಯಿ ತನ್ನ ತಂದೆಯು ಸುಭೇದಾರನೆಂದು ಹೆಮ್ಮೆಪಟ್ಟರೆ ತನ್ನ ಮಗನು ಸುಭೇದಾರನಾಗಬಹುದೇ? ಅದರಂತೆ ಕವಿಗಳು ಭಕ್ತನ ಪ್ರಶಂಸೆ ಮಾಡಿದ ಮಾತ್ರಕ್ಕೆ ಭಕ್ತನು ಗುರುಜಂಗಮನಾಗಲಾರನು.

**ಪ್ರಶ್ನೆ:** ಶಿವಭಕ್ತರಿಗಿಂತ ಹಿರಿಯರಿಲ್ಲ.

**ಉತ್ತರ:** ಗುರು ಲಿಂಗ ಜಂಗಮ ಸೇವೆ ಮಾಡಲಿಕ್ಕೆ ಶಿವಭಕ್ತರಿಗಿಂತ ಯಾರೂ ಹಿರಿಯರಲ್ಲ; ಇವರೇ ಹಿರಿಯರು ಇದು ಸತ್ಯ.

**ಪ್ರಶ್ನೆ:** ಬಸವೇಶ್ವರನು ಗುರುಲಿಂಗಜಂಗಮಾದಿ ಸರ್ವಕ್ಕೂ ಭಕ್ತನೇ ಆಧಾರ.

**ಉತ್ತರ:** ಗುರುಲಿಂಗಜಂಗಮಾದಿಗಳನ್ನು ಪೂಜಾರ್ಚನೆ ಮಾಡಲಿಕ್ಕೆ ಭಕ್ತನೇ ಆಧಾರ; ಇವನನ್ನು ಬಿಟ್ಟು ಮತ್ತಾರೂ ಇಲ್ಲ; ಇದೂ ನಿಜ.

**ಪ್ರಶ್ನೆ:** ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರನು ಭಕ್ತರಿಗೆ ತಾವು ಮಕ್ಕಳೆಂದು.

**ಉತ್ತರ:** ಗುರು ಲಿಂಗ ಜಂಗಮಕ್ಕೆ ಭಕ್ತನು ತಾಯಿಯಂತೆ ಸೇವಾ ಶುಶ್ರೂಷಾದಿಗಳನ್ನು ಮಾಡುವದರಿಂದ ಮಕ್ಕಳೆಂದು ಭಾವಿಸಿರುವದು ತಪ್ಪಲ್ಲ.

**ಪ್ರಶ್ನೆ:** ಬಾಲಲೀಲಾ ಮಹಾಂತ ಶಿವಯೋಗಿಯು "ತೂಗಿರೇ ಭಕ್ತರು ಮಗನ ತೂಗಿರೇ".

**ಉತ್ತರ:** ಮಹಾಂತ ಶಿವಯೋಗಿಗೆ ಬಾಲಲೀಲಾವಸ್ಥೆ ಬಂದದ್ದರಿಂದ ಈತನನ್ನು ಭಕ್ತಾದಿಗಳು ತೂಗಮಂಚದ ಮೇಲೆ ಮಲಗಿಸಿ, ಭಕ್ತಿರಸದ ದಣಿಯಲುಂಡು, 'ತೂಗಿರೇ ಭಕ್ತರು ಮಗನ ತೂಗಿರೇ' ಎಂದು ಆನಂದಾತಿರೇಕ ದಲ್ಲಿ ಹಾಡಿದ ಮಾತ್ರಕ್ಕೆ ಭಕ್ತನು ಜಂಗಮನಾಗಬಲ್ಲನೇ ?

ವಚನ: ವಂಚಿಸುವ ಸತಿಸುತ ಬಂಧುಗಳು ಮೊದಲಾದ ಲೋಕವನಂಬಿ ನಿರ್ವಂಚಕರಪ್ಪ ಗುರುಲಿಂಗಜಂಗಮದ ವಂಚಿಸಿ ನರಕಕ್ಕಿಳಿವವರ ನೇನೆಂಬೆ ನಯ್ಯಾ। ಅಕ್ಕಟಕ್ಕಟಾ ಹೀಗೆಯೇ ಶಿವಾಚಾರ। ಹೀಗೆಯೇ ಸದಾಚಾರ। ಹೀಗೆಯೇ ಭೃತ್ಯಾಚಾರ। ಭಕ್ತಿಯುಕ್ತಿಯ ನರಿಯದೆ ತನು ಮನಧನಂಗಳು ಕೆಟ್ಟುಹೋದಾವೆಂಬ ಯುಕ್ತಿಯ ನರಿಯದೆ ಮರ್ಮವ ನರಿದು ವಂಚಿಸುವವರ ವಂಚಿಸಿ ನಿರ್ವಂಚಕರಾಗಿ ಗುರುಲಿಂಗಜಂಗಮಕ್ಕೆ ದಾಸೋಹ ಮಾಡಲು ತನುಕೆಡದು ಮನಕೆಡದು ಧನಕೆಡದು ಭಕ್ತಿ ಯುಂಟು ಯುಕ್ತಿಯುಂಟು ಮುಕ್ತಿಯುಂಟು ಇದು ಸತ್ಯ ಶಿವಬಲ್ಲ ಶಿವನಾಣೆ ಉರುಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ॥

ಹೀಗೆ ಗುರುಲಿಂಗಜಂಗಮರೇ ಭಕ್ತರಿಗಾಧಾರವೆಂದು ಹೇಳಿದ್ದನ್ನು ಮರೆ ಮಾಚಿ, ಭಕ್ತರೆ ಜಂಗಮಕ್ಕಿಂತ ಶ್ರೇಷ್ಠರೆಂದು ಹೇಳಿ ಅವರ ಹಣವನ್ನು ಹರಣ ಮಾಡಬೇಕೆಂದು ಕುಯುಕ್ತಿಯನ್ನು ಹೂಡಿರುವಿಯೆಂದು ಕಾಣುತ್ತದೆ.

**ಪ್ರಶ್ನೆ:** ಸಕಲ ಗುರುಜಂಗಮರು ಮೊದಲು ಭಕ್ತರು.

**ಉತ್ತರ:** ಗುರುಲಿಂಗಜಂಗಮರು ಮೊದಲು ತಮ್ಮಿಷ್ಟಲಿಂಗ ಭಕ್ತರು. 'ಲಿಂಗವ ಪೂಜಿಸಿ ಲಿಂಗವೇ ಆಗುವ' ಎಂಬ ಬಾಲಲೀಲಾ ಮಹಾಂತ ಶಿವ ಯೋಗಿಯು ಹಾಡಿದಂತೆ ಇಷ್ಟಲಿಂಗ ಭಕ್ತರಲ್ಲದೆ ಅನಾದಿ ಭಕ್ತರಲ್ಲ. ಇವಕ್ಕೆ ನೀವು ಒಪ್ಪದಿದ್ದರೆ ಗುರುದ್ರೋಹಿಗಳಲ್ಲದೆ ನಾಸ್ತಿಕರೆಂದೂ ವೀರಶೈವ ಭಕ್ತರಲ್ಲ ವೆಂದೂ ಸಿದ್ಧವಾಗುತ್ತದೆ.

**ಪ್ರಶ್ನೆ:** ಎಡೆಯೂರು ಸಿದ್ಧಲಿಂಗೇಶ್ವರನು ಭಕ್ತನು, ಹುಬ್ಬಳ್ಳಿಯ ಮೂರು ಸಾವಿರ ಮಠದ ಕರ್ತೃ ಜಗದ್ಗುರು ಭಕ್ತರು (ಬಳ್ಳಾರಿಯ ೧೦–೯–೧೯೫೭ನೇ ದಿನಾಂಕದ ನವಸಂದೇಶ ನೋಡಿರಿ).

**ಉತ್ತರ:** ಕಣ್ಣಿಗೆ ಕಾಣುವವಕ್ಕೆ ಕನ್ನಡಿ ಏತಕ್ಕೆ? ದೀಕ್ಷಾ–ಶಿಕ್ಷಾಧಿ ಕಾರವನ್ನು ವಹಿಸಿಕೊಂಡು ಬಂದ ಮುಖ್ಯ ಪೀಠಾಚಾರ್ಯರ ಅಧಿಕಾರಸ್ಥಾನ ಗಳು, ಅವುಗಳ ಶಾಖಾ ಮಠಗಳು ದೇಶದ ಎಲ್ಲ ಕಡೆಗೆ ಇರುವದರಿಂದ ಆ ಮಠಗಳಲ್ಲಿ ವಾಸ ಮಾಡುವ ಶಿವಾಂಶಕ ಗುರುಜಂಗಮರಿಗೆ ಪ್ರಾಪಂಚಿಕ, ಭಾವಿಕ ಭಕ್ತಾದಿಗಳು ಕಾಮ್ಯಕರ್ಮಾಪೇಕ್ಷೆಯಿಂದ ಅವರ ಮಠಕ್ಕೆ ನಡೆದುಕೊಳ್ಳು ವಾಗ್ಗೆ— ಸ್ವಾಮೀ, ನಮಗೆ ಮಕ್ಕಳಾದರೆ ನಿಮಗೆ ಒಂದು ಹುಡುಗನನ್ನು ತಮ್ಮ ಮಠಕ್ಕೆ ಕೊಡುತ್ತೇವೆ; ನಮಗೆ ಮಕ್ಕಳಾಗಬೇಕೆಂದು ಹಣ್ಣು–ಕಾಯಿಗಳನ್ನು ಮುಂದಿಟ್ಟು ಕೈಮುಗಿದು ಪ್ರಾರ್ಥಿಸಿಕೊಳ್ಳುವದರಿಂದ ಶ್ರೀಗಳವರು ತಮ್ಮ ಅಮೃತ ಹಸ್ತದಿಂದ ಅವರಿಗೆ ಮುಟ್ಟಿಕೊಡುವರು. ಆ ಆಶೀರ್ವಾದ ಬಲದಿಂದ ಹುಟ್ಟಿದ ಮಕ್ಕಳನ್ನು ಮಠಕ್ಕೆ ತಂದುಕೊಟ್ಟರೆ, ಶ್ರೀಗಳವರು ಆ ವಟುವನ್ನು ಸ್ವೀಕರಿಸಬಹುದು; ಇಲ್ಲವೆ ನಿಮ್ಮ ವಂಶಕ್ಕೆ ಇರಲೆಂದು ಬಿಡಬಹುದು. ಈ ಪ್ರಕಾರ ಸ್ವತಂತ್ರರಾದ ಶಿವಯೋಗಿಗಳು ಸ್ವೀಕರಿಸಿದ ವಟುಗಳನ್ನು ತಮ್ಮ ಆಶ್ರಮ ಪದ್ಧತಿ ಪ್ರಕಾರ ಆಣವಮಲ, ಮಾಯಾಮಲ, ಕಾರ್ಮಿಕ ಮಲ ಗಳನ್ನೂ ದೀಕ್ಷಾತ್ರಯದಿಂದ ಭಕ್ತನ ರಕ್ತಾಂಶ ದೋಷವನ್ನೂ ಹೋಗಲಾಡಿಸಿ

ಇಂಥ ವಟುಗಳಿಗೆ ಜಂಗಮಸ್ಥಲದ ಪಟ್ಟಾಧಿಕಾರವನ್ನು ಕೊಟ್ಟಿದ್ದಾರೆ. ಈಗ್ಯೂ ಅಂಥ ಭಕ್ತವಟುಗಳಿಗೆ ಕೊಡುತ್ತಾರೆ.

ಈ ಕಲಿಕಾಲ ಪ್ರಭಾವದಿಂದ ಈಗಿನ ಜನಗಳು ಬಡಕೆ ಸಂತತಿಯವರನ್ನು, ತಮಗೆ ಬೇಕಾದ ಹೆಂಗಸಿನ ಮಕ್ಕಳನ್ನು, ಮದುವೆ ಆಗದೆ ವ್ಯಭಿಚಾರತನದಿಂದ ಹುಟ್ಟಿದ ಮಕ್ಕಳನ್ನು ಮಠಸ್ಥಾನಕ್ಕೆ ತರಹತ್ತಿದ್ದರಿಂದ ಶ್ರೀಗಳವರು ಸಂತಾಪ ಗೊಂಡು, ವೀರಶೈವ ಮಹಾ ಸಭೆಯನ್ನು ಕೂಡಿಸಿ, ಆ ಸಭೆಯಲ್ಲಿ ಇಂಥ ವಿಷಯಗಳನ್ನು ಚರ್ಚಿಸಿ, ಇನ್ನು ಮುಂದೆ ವಂಶಪರಂಪರಾಗತವಾದ ಗುರುಸ್ಥಲ ಜಂಗಮರ ಸರ್ವಲಕ್ಷಣ ಸಂಪನ್ನರಾದ ಮಕ್ಕಳನ್ನೇ ಆರಿಸಿ, ಅವರಿಗೆ ಧರ್ಮ ವಿದ್ಯೆಯನ್ನು ಕಲಿಸಬೇಕೆಂದು ಠರಾವು ಮಾಡಿ, ಗುರುಕುಲವಾಸದ ಶಿವಯೋಗ ಮಂದಿರ ಸ್ಥಾಪಿಸಿದ್ದಾರೆ. ಇಂಥ ವಟುಗಳನ್ನು ಆರಿಸುವಾಗ ಆ ಗ್ರಾಮದ ಗೌಡ–ಕುಲಕರ್ಣಿ ಹಾಗು ವೀರಶೈವ ಭಕ್ತಾದಿಗಳಿಂದ ಇವರು ಯೋಗ್ಯ ನಡತೆ ಯುಳ್ಳ ಮಠಾಧೀಶ್ವರ ವಂಶದವರೆಂಬ ಬಗ್ಗೆ ಸರ್ಟಿಫಿಕೇಟ ತರಿಸಿ ಅಂಥವರನ್ನು ಆರಿಸುತ್ತ ಬಂದಿದ್ದಾರೆ. ಮುಂದಾದರೂ ಹೀಗೆಯೇ ನಡೆಯುತ್ತದೆ.

**ಪ್ರಶ್ನೆ:** ಮಧ್ಯಕಾಲದಲ್ಲಿ ಗುರುಗಳಾಗಿದ್ದ ಕೆಲವು ಭಕ್ತರು ವ್ರತಗೆಟ್ಟು ಪತಿತರಾಗಿ ಲಗ್ನವಾಗಿ ಮಕ್ಕಳನ್ನು ತಮ್ಮ ಸ್ಥಾನಗಳಿಗೆ ತರಹತ್ತಿದರು. ಇದು ಅನುಚಿತ ಪದ್ಧತಿ.

**ಉತ್ತರ:** ಇವರು ಮಧ್ಯಕಾಲದವರಲ್ಲ. ಮಠಸ್ಥಾಪನಾಚಾರ್ಯರ ಕಾಲದಿಂದ ವಂಶಪರಂಪರವಾಗಿ ಬಂದ ವೀರಮಾಹೇಶ್ವರರ ಸ್ಥಾನದವರು. ನಿಮ್ಮಂಥ ಭಕ್ತರು ವ್ರತಗೆಟ್ಟು ಗುರುಸ್ಥಲದಯ್ಯನವರಾಗಬೇಕೆಂಬುವರೇ ವ್ರತ ಗೆಟ್ಟವರು. ಗುರುಸ್ಥಲದ ಪಟ್ಟಾಧಿಕಾರಿಯು ವಂಶಕ್ಕೆ ಯಾರೂ ಇಲ್ಲದಿದ್ದರೆ ಶಾಸ್ತ್ರೋಕ್ತ ಪ್ರಕಾರ ಲಗ್ನವಾಗಿ ಮಕ್ಕಳಾದ ನಂತರ ಅವರನ್ನು ಪಟ್ಟಕ್ಕೆ ತರ ಬೇಕೆಂಬ ನಿಯಮವಿರುವದರಿಂದ ಲಗ್ನವಾಗಿ ಪುತ್ರಸಂತತಿ ಕಾಯ್ದಿದ್ದಾರೆ. ಸೂರ್ಯನಿಗೆ ಮೇಘವು ಅಡ್ಡಬರುವದರಿಂದ ಅಪಕಾರವಾಗುವದಿಲ್ಲ; ಹಾಗು ಉಪಕಾರವೂ ಇಲ್ಲ. ಅದರಂತೆ ಗುರುಸ್ಥಾನಕ್ಕೆ ಯಾವದೂ ಕುಂದು ಇಲ್ಲ.

**ಪ್ರಶ್ನೆ:** ಹೀಗೆ ಬೆಳೆದ ಸಂತಾನವನ್ನು ಗುರುವಂಶ, ಗುರುಕುಲ, ಜಂಗಮ ಕುಲವೆನ್ನಹತ್ತಿದರು. ಈ ರೂಢಿಯು ಈಗಲೂ ಕಾಣಬಹುದು.

**ಉತ್ತರ:** ಗುರುವಂಶವು ಮೃತಗೆಟ್ಟಿಲ್ಲ. ಶ್ಲೋಕಗಳನ್ನು ನೋಡಿರಿ.

ಶ್ಲೋಕ: ಪೂಜಯೇ ದ್ದಾದಶೇಶ್ಶೈವದ್ವಿಜಂ ಲಿಂಗಾಂಗ ಸಂಗಿನಂ। ಯಃಪೂಜಯತಿ ಲಿಂಗಾಂಗಧ್ಯಾನಾ ಸಕ್ತಧಿಯಂ ದ್ವಿಜಂ। ವೃತಲಿಂಗ ಸದಾಚಾರ ನಿರುತಂ ದ್ವಿಜಪುಂಗವಂ। ಶಿವಮಾಹೇಶ್ವರಂ ಸವ್ಯ ಕ್ಪೂಜಯೆದ್ಭಕ್ತಿ ಮಾನ್ನರಃ॥

ಶ್ಲೋಕ: ಶಿವಮಾಹುರ್ಭಗತ ಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಾಃ। ಬ್ರಾಹ್ಮಣಂ ಲಿಂಗಿನಂ ಚೈವ ಬ್ರಾಹ್ಮಣಂ ವಾಸ್ಯಲಿಂಗಿನಂ॥ ಸ್ವವೃತ್ತಿಮಭಿ ಪನ್ನಾಯ ಲಿಂಗಿನೇ ಚೇತ ರಾಯಜ। ದೇಯ ಮಾಹುರ್ಮಹಾರಾಜ ಉಭಾವೇ ತೌತಪಸ್ವಿನಾ॥

ಹೀಗೆ ವೀರಶೈವರಲ್ಲಿ ಗುರುಸ್ಥಲದ ಬ್ರಾಹ್ಮಣ್ಯವನ್ನು ಜಾಗ್ರತಗೊಳಿಸುತ್ತವೆ. "ಬ್ರಾಹ್ಮಣೋಸ್ಯ ಮುಖಮಾಸೀತ್" ಎಂಬ ವೇದವಾಣಿಯು ಪರಶಿವನ ಪಂಚಮುಖೋತ್ಪನ್ನ ನಂದೀಶ್ವರಾದಿ ಗಣವಂಶೀಯರಾದ ಗುರುಸ್ಥಲ ಮಠದವರಲ್ಲಿ ವಂಶದಿಂದ ಬ್ರಾಹ್ಮಣ್ಯವನ್ನು ಪ್ರತಿಪಾದಿಸುತ್ತದೆ. ಹೀಗೆ ವಂಶ ಜ್ಞಾನಕ್ರಿಯಾ ಶಿವದೀಕ್ಷಾದಿ ಸಂಸ್ಕಾರಗಳಿಂದ ಅಪ್ರಾಕೃತ ಬ್ರಾಹ್ಮಣರಾದ ವೀರಶೈವಾಶ್ರಮಿಗಳು ಯಜ್ಞಾದಿಪ್ರಾಕೃತ, ಕರ್ಮಕಾಂಡವನ್ನು ದಾಟಿ ಕೇವಲ ಭಕ್ತಿ ಕಾಂಡವಲ್ಲಿ ನಿಷ್ಠರಾಗಿರುವದರಿಂದ ಇವರಿಗೆ ಪ್ರಾಕೃತ ಬ್ರಾಹ್ಮಣರಂತೆ ಕರ್ಮಾಂಗ ಭೂತಗಳಾದ ಶಿಖಾಸೂತ್ರ (ಜುಟ್ಟಿ-ಜನಿವಾರ) ಗಳ ಅವಶ್ಯಕತೆಯಿಲ್ಲ. ಹೀಗೆ ವಂಶಪರಂಪರಗಾಗಿ ಬಂದ ಮಠಸ್ಥರು ಅಪ್ರಾಕೃತ ಬ್ರಾಹ್ಮಣರು. "ವೀರ ಸಾಹಿತ್ಯ"ದಲ್ಲಿ ಕುಲ, ಅಕುಲಗಳು ಎಂದು ಪ್ರಸಿದ್ಧವಿದ್ದು ವಂಶ ಆಗಂತುಕ ವೀರಶೈವಾಚಾರ ಕೌಸ್ತುಭದಲ್ಲಿ "ವಂಶ ಆಗುಂತಕ ಶ್ಚೇತಿ ದ್ವಿವಿಧಃ ಶಿಷ್ಯಈರ್ಯತೆ" ಎಂಬಂತೆ ಇವರು ಧರ್ಮ ಶಾಸ್ತ್ರಪದ್ಧತಿಯ ಪ್ರಕಾರ ಲಗ್ನವಾಗಿ ಮುಸಿಯಲ್ಲಿ ಕರಗಿಸಲ್ಪಟ್ಟ ಭಂಗಾರವು ಪಡಿಯಚ್ಚಿನಾಕಾರವನ್ನು ಹೇಗೆ ಹೊಂದುತ್ತವೆಯೋ ಅದರಂತೆ ಚೈತನ್ಯದಿಂದೊಡಗೂಡಿದ ಬಿಂದುವಿನಿಂದ ಗುರುವು ಉದಯಿಸಿರುವದರಿಂದ ಇವರ ವಂಶವೇ ಪರಂಪರಾಗತವಾಗಿ ಅಚ್ಚಳಿಯದೆ ಸ್ಥಿರವಾಗಿ ಇಲ್ಲಿಯ ಪರ್ಯಂತರ ಕಾಣಿಸುತ್ತಿರುವದು ಸಹಜವಿದೆ.

**ಪ್ರಶ್ನೆ:** ಅಂದಬಳಿಕ ಹೀಗೆ ವೃತಗೆಟ್ಟು ಬೆಳೆದ ಸಂತಾನವು ಗುರು ಜಂಗಮರಾಗಲು ಅರ್ಹವ್ಯೋ ? ಶುದ್ಧಾಚರಣೆಯಲ್ಲಿ ನಡೆವ ಭಕ್ತವಂಶವು ಅರ್ಹವ್ಯೋ ? ಸೂಜ್ಞರು ನಿರ್ವಿಕಾರದಿಂದ ನಿರ್ಣಯಿಸಲಿ. ಗುರು ಜಂಗಮ ಸ್ಥಗಳಿಗೆ ಕುಲವಿಲ್ಲ.

**ಉತ್ತರ:** " ಶಿವಾಗಮದಲ್ಲಿ " :

ಶ್ಲೋಕ: ಮಮಪಂಚ ಮುಖೋದ್ಭೂತಾಃ ಸಂಸ್ಥಾಪ್ಯ ಸಕಲಾನ್ ಭುವಿ। ದೀಕ್ಷಾಂ ಕೃತಾಕ್ರಮಾದೇವ ಪಂಚಮಾನಾಂ ನಗಾತ್ಮಜೆ। ಕಲೌತದ್ವಂಶ ಜಾತಾನಾಂ ದೀಕ್ಷಾನುಗ್ರಹ ಕಾರಣಾತ್। ನಿಧಾಯ ನಿಜ ಶಿಷ್ಯಾಂಶ್ಚ ಪುನಸ್ತೇ ಮಾಂಸ ಮಾಗತಾಃ॥

ಇತ್ಯಾದಿ ಆಗಮ ವಚನಾನುಸಾರವಾಗಿಯೂ ಪರಮೇಶ್ವರನ ಪಂಚಮುಖ ಸಂಭೂತರಾದ ವೀರ, ನಂದಿ, ಭೃಂಗಿ, ಸ್ಕಂದ ಎಂಬೀ ಗಣೇಶ್ವರರು ಆಯಾ ಯುಗದಲ್ಲಿ ಭಿನ್ನ ನಾಮ ದೇಹವುಳ್ಳವರಾಗಿ ತತ್ತತ್‌ಕ್ಷೇತ್ರಗಳಲ್ಲಿ ರಾಮನಾಥ, ಮಲ್ಲಿಕಾರ್ಜುನ' ಸೋಮೇಶ, ಸಿದ್ಧೇಶ, ವಿಶ್ವೇಶ್ವರ ಎಂಬೀ ಲಿಂಗಗಳಿಂದ ಭೂಮಿಯಲ್ಲಿ ಅವತರಿಸಿರುವರು. ಮತ್ತು ಆ ಪರಮೇಶ್ವರನ ಈಶಾನ್ಯ ಮುಖ ಸಂಭೂತ ಪಂಚವಕ್ತ್ರನೆಂಬ ಗಣೇಶನ ಪಂಚಮುಖಗಳಿಂದ ಹುಟ್ಟಿದ ಮಖಾರಿ, ಸ್ಮರಾರಿ, ಪುರಾರಿ, ಭವಾರಿ ಎಂಬೀ ಪಂಚಮರು ಭೂಮಿಯಲ್ಲಿ ಅವತರಿಸಿ ಭಕ್ತಕುಲವಾಯಿತೆಂದೂ ಅವರಿಂದ ಪಾಣಿಗೃಹಿತರಾದ ಸ್ತ್ರೀಯರು ಕ್ರಮ ವಾಗಿ ಭಕ್ತರ ವಂಶಾವಳಿಗೆ ಮೂಲಭೂತ ಸ್ತ್ರೀಪುರುಷರೆಂದೆನಿಸಿದರೆಂದೂ ತಿಳಿ.

ಇದರಂತೆ ಪಂಚಾಚಾರ್ಯರು ಅವರಿಂದ ಪರಿಗ್ರಹಿಸಲ್ಪಟ್ಟ ಸ್ತ್ರೀಯರು ಕ್ರಮವಾಗಿ ಗುರುಸ್ಥಲದ ವಂಶಜರಾಗಿದ್ದು ಇದೇ ವಂಶಪೂಜ್ಯ ವಸ್ತು, ವ್ರತಗೆಟ್ಟ ಸಂತಾನವಲ್ಲವೆಂದು ಮೇಲಿನ ಪ್ರಶ್ನೆಯಲ್ಲಿ ಬರೆದಿದ್ದೇನೆ. ಗುರುಜಂಗಮರು ಬಿಂಬ, ಪ್ರತಿಬಿಂಬದಂತೆ ಇದ್ದುದರಿಂದ, ಮತಸ್ಥಾಪನಾಚಾರ್ಯರು ಗುರುಕುಲವು ಪೂಜ್ಯವಸ್ತುವೆಂದು ಭಕ್ತರ ಕುಲವು ಪೂಜಕವೆಂದು ನಿರ್ಣಯಿಸಿ ಗ್ರಂಥಗಳನ್ನು ಬರೆದಿಟ್ಟಿರುವರು. ಗುರು–ಜಂಗಮರಿಗೆ ಕುಲವಿಲ್ಲೆಂದರೆ ಗುರುಕುಲವಾಸ, ಜಂಗಮಕುಲವಾಸವೆಂದು ಬರೆಯುತ್ತಿರಲಿಲ್ಲ. ಆದ್ದರಿಂದ ಗುರುವಿಗೆ ಕುಲ ವುಂಟು.

**ಪ್ರಶ್ನೆ:** ಬಸವ, ಚನ್ನಬಸವ, ಪ್ರಭುಗಳು ಯಾವ ಒಂದು ವಿಶೇಷ ಕುಲ ದವರು ?

**ಉತ್ತರ:** ಬಸವ, ಚನ್ನಬಸವ, ಪ್ರಭುದೇವರು ಶಿವನ ಸನ್ನಿಧಿಯ ಪ್ರಮಥಾಧೀಶ್ವರರು. ಶಿವನ ಅಪ್ಪಣೆಯ ಪ್ರಕಾರ ಭೂಲೋಕದಲ್ಲಿ ಉಚ್ಚ ಕುಲದಲ್ಲಿ ಉದ್ಭವಿಸಿದ ದಿವ್ಯ ಸಿದ್ಧಿಪುರುಷರು. ಇವರ ಮುಖಾಂತರ:

ಶ್ಲೋಕ: ಅತಃ ಪರಂ ಪ್ರವಕ್ಷ್ಯಾಮಿ ಪಂಚಾಚಾರ್ಯ ಸಮುದ್ಭವಂ । ತೇಷಾಂ ನಾಮಾನಿ ದೇವತ್ವಂ ಶೃಣುನಿಶ್ಚಲ ಚೇತಸಾ ॥ ಘಂಟಾಕರ್ಣ ಗಣಶ್ಚಾದ್ಯೋ ಗಜಕರ್ಣೋ ದ್ವಿತೀಯಕಃ । ತೃತಿಯೋ ರೇಣುಕಃ ಖ್ಯಾತಶ್ಚತುರ್ಥೋ ದಾರುಕಸ್ತಥಾ ॥ ಪಂಚಮೋ ವಿಶ್ವಕರ್ಣಶ್ಚ ಪಂಚಾರಾಧ್ಯ ಇತಿಸ್ಮೃತಾಃ । ತಏವ ಯುಗಭೇದೇನ ಪ್ರತಿ ನಾಮಾನ್ಯ ಪಾಗತಾಃ ॥

ಶಿವನ ಪಂಚಮುಖದಿಂದ ಉದ್ಭವಿಸಿದ ಪಂಚಾಚಾರ್ಯರಿಂದ ಸ್ಥಾಪಿಸಲ್ಪಟ್ಟ ವೀರಶೈವ ಮತವು ನಿಮ್ಮಂಥವರಿಂದ ಹೀನಾವಸ್ಥೆಗೆ ಬಂದದ್ದರಿಂದ ದೇಶ ಕಾಲ ಪರಿಸ್ಥಿತಿಗನುಸರಿಸಿ ಅವರು ಅನೇಕ ಜನರಿಗೆ ಲಿಂಗಧರಿಸಿ, ಲಿಂಗಾಂಗ ಸಾಮರಸ್ಯದ ಮಾರ್ಗವನ್ನು ತೋರಿಸಿ, ಗುರುಲಿಂಗಜಂಗಮದ ಭಕ್ತಿಯನ್ನುಳಿಸಿ, ಧರ್ಮ ಜಾಗ್ರತೆ ಮಾಡಿ, ತಮ್ಮ ಕಾರ್ಯ ಮುಗಿಸಿ ಶಿವಸಾನ್ನಿಧ್ಯ ಹೋದಿದರು. ಬಸವ, ಚನ್ನಬಸವ, ಪ್ರಭು ಇವರು ಸಾಕ್ಷಾತ್ ಪರಶಿವನ ಅಂಶೀಭೂತರಾದ ಉಚ್ಚ ಕುಲದವರೆಂದೇ ತಿಳಿಯಿರಿ.

ಪಾಟೀಲರೆ, ನೀವು ಮಾತ್ರ ಹುಲಿಬಣ್ಣಕ್ಕಾಗಿ ನರಿ ಮೈಸುಟ್ಟುಕೊಂಡಂತೆ ಸಾಮಾನ್ಯರಾದ ನೀವು ಶಿವನ ಅವತಾರಿಗಳಾದ–ಮಹಾತ್ಮರಾದ ಸಿದ್ಧರ ಉದಾಹರಣೆ ತೆಗೆದುಕೊಂಡದ್ದು ತೀರಾ ಸಮಂಜಸವಾದದ್ದಲ್ಲ. ಆಕಾಶಕ್ಕೂ ಭೂಮಿಗೂ ಎಷ್ಟು ಅಂತರವೋ ಅಷ್ಟು ಅಂತರವಾಗಿದೆ.

**ಪ್ರಶ್ನೆ:** ಸಕಲ ಭಕ್ತರ ಸಹಾಯದಿಂದ ಸ್ಥಾಪಿಸಲ್ಪಟ್ಟ ಶಿವಯೋಗ ಮಂದಿರದಲ್ಲಿ ಭಕ್ತ ವಟುಗಳನ್ನೇ ನಿರಾಕರಿಸಿ ಮಧ್ಯಕಾಲದ ಕೃತ್ರಿಮ ವರ್ಗದವರನ್ನೇ ಆರಿಸಿ, ತೋರಿಕೆಯ ಧರ್ಮವಿದ್ಯೆಯನ್ನು ಕೊಟ್ಟು ಹಾಗು ಕಾಶಿಯಲ್ಲಿ ಕಾವ್ಯ, ವ್ಯಾಕರಣ ತರ್ಕ ಹಾಗು ವೀರಶೈವ ಶಾಸ್ತ್ರವನ್ನೋದಿಸಿ ಧರ್ಮ ಪೀಠಗಳಿಗೆ ತರಹತ್ತಿ, ಸಮಾಜದ ಆಧಾರಸ್ತಂಭರಾದ ಭಕ್ತರನ್ನು ಬಿಟ್ಟದ್ದರಿಂದ ಬಹು ದೊಡ್ಡದಾದ ಶುದ್ಧ ಭಕ್ತ ಸಮೂಹವು ಗುರುಜಂಗಮರ ಸ್ಥಾನಗಳಲ್ಲಿ ನಾಮಶೇಷವಾಗಹತ್ತಿದೆ. ಇದು ಶಿವಯೋಗ ಮಾರ್ಗವೋ? ಕೆಲವರ ಭೋಗಮಾರ್ಗವೋ? ಈ ಮಹಾ ಪ್ರಮಾದವನ್ನು ತೀವ್ರ ತಿದ್ದಿಕೊಂಡು ಆ ಸಂಸ್ಥೆಯ ಕಲಂಕವನ್ನು ಈಗಿನ ಅದರ ಚಾಲಕರು ಕಳೆಯಲಿ.

**ಉತ್ತರ:** ಶತಕತ್ರಯ ಪದ್ಯ:

ಪದ್ಯ: ಪರರಲ್ಲೀಕ್ಷಿಸೆ ಕೊಂಬುವರ್ಕೊಡುವವರ್ತಾವನ್ಯರಲ್ಲಂ ಸ್ವಕೀ । ಯರೇ ಸತ್ಯಂ । ಬಳಿಕಲ್ಲಿ ದಿರ್ದೊಡಕಟಾಸ್ವಸ್ತ್ರೀ ಪುತ್ರವಿತ್ತಾದಿಯಂ ॥ ಪರರ್ಗೆ ಕೊಟ್ಟವರುಂಟೇ ನೋಳ್ಪೊಡೆ ನಿಜಸ್ತ್ರೀಪುತ್ರವಿತ್ತಾದಿಯಂ । ಪರ ಮಂತಲ್ಲ ದೊಡೀವರೆ ಸತಿ ಪರರ್ಗಾದ್ಯರ್ಶೀರ್ವಾವಲ್ಲಭಾ ॥

ತಾತ್ಪರ್ಯ: ವಿಚಾರಮಾಡಿ ನೋಡಿದರೆ ಕೊಟ್ಟಿದ್ದನ್ನು ತೆಗೆದುಕೊಳ್ಳು ವವರು ಪೆರರಲ್ಲ, ಕೊಡುವವರು ಅನ್ಯರಲ್ಲ; ತೆಗೆದುಕೊಳ್ಳುವವರು ನಿಜ ವಾಗಿಯೂ ತಮ್ಮವರೇ ಹಾಗಿಲ್ಲದಿದ್ದರೆ ಮಕ್ಕಳು, ಹಣ ಮೊದಲಾದವುಗಳನ್ನೆಲ್ಲ ಪೆರರಿಗೆ ಯಾರದರೂ ಕೊಡುವುದುಂಟೇ ? ವಿಚಾರಮಾಡಲಾಗಿ ಪೂರ್ವದ ಶಿವ ಶರಣರು ತಮ್ಮ ಪತ್ನೀ, ಪುತ್ರ, ಧನಾದಿಗಳನ್ನು ಶ್ರೇಷ್ಠರಾದ ಗುರುಲಿಂಗ ಜಂಗಮರಿಗೆ ಆಸಕ್ತಿಗೂಡಿ ದಾನ ಮಾಡುತಿದ್ದರೆ ಅವರು ತಮ್ಮವರೆಂದು ತಿಳಿ ದಿದ್ದರಿಂದಲೇ ವಿಶ್ವಾಸದಿಂದ ಅವರಿಗೆ ಸಮರ್ಪಿಸಿದರೆಂದೇ ಸಮಾಜವು ಮಹೋ ನ್ನತ ಸ್ಥಾನ ಪಡೆದಿದೆ. ದೊಡ್ಡದೊಂದು ಕಟ್ಟಿಗೆಯ ಮುಂದಿಗೆಗೆ ಹತ್ತಿದ ಉರಿಯು ಸಾವಕಾಶವಾಗಿ ಪ್ರಜ್ವಲಿಸುತ್ತ ಹೋಗುವಂತೆ ಹಾನಗಲ್ಲ ಶ್ರೀ. ಮು. ನಿ. ಪ್ರ. ಕುಮಾರ ಮಹಾಸ್ವಾಮಿಗಳವರು ಲಿಂಗಾಂಗ ತಪಃ ಪ್ರಕಾಶ ಶಕ್ತಿ ಯಿಂದ ಶ್ರೀ ಮದ್ವೀರಶೈವ ಮಹಾಸಭೆಯನ್ನು ಇವರ ಪ್ರೇರಣೆಯಿಂದಲೇ ನಿರ್ಮಿಸಲ್ಪಟ್ಟು ೧೯೦೮ನೇ ಇಸ್ವಿಯಲ್ಲಿ ನಡೆಯಬೇಕೆಂದು ನಿಶ್ಚಿತವಾದ ನಾಲ್ಕನೇ ವೀರಶೈವ ಮಹಾಸಭೆಯ ಪ್ರಕಟನಾ ಪತ್ರಿಕೆಯಲ್ಲಿ ಶಿವಯೋಗ ಮಂದಿರದ ವಿಚಾರವನ್ನು ಭಕ್ತಜನಾಂಗದಲ್ಲಿ ಜಾಹೀರ ಪ್ರಕಟನೆಯಿಂದ ಪ್ರಚುರ ಪಡಿಸಿ ಬಾಗಲಕೋಟೆಯಲ್ಲಿ ನಡೆದ ನಾಲ್ಕನೇ ಮಹಾಸಭೆಯ ಅಧ್ಯಕ್ಷರಾದ ಶ್ರೀಮಂತ ರಾಜಾ ಲಖಮನಗೌಡ ಸರದೇಸಾಯಿ ವಂಟಮುರಿ ಇವರ ಅಧ್ಯ ಕ್ಷತೆಯಲ್ಲಿ ಶಿವಯೋಗಮಂದಿರ ಸ್ಥಾಪಿತವಾಗಬೇಕೆಂಬ ಠರಾವು ಪಾಸಾಗಿ ಸೊಲ್ಲಾಪುರದ ಶ್ರೀಮಂತ ವಾರದ ಮಲ್ಲಪ್ಪನವರ ಅಧ್ಯಕ್ಷತೆಯಲ್ಲಿ ಆಲೋ ಚನೆಯ ಸಭಾ ನಡೆದು, ಶ್ರೀಮಂತ ಶಂಕರೆಪ್ಪ ದೇಸಾಯಿ ಅಂಣಿಗೇರಿಯವರು ಅವರಲ್ಲಿ ನಮ್ಮ ಗುರುಸ್ಥಲದ ಅಯ್ಯನವರ ವಟುಗಳನ್ನು ಈ ಶಿವಯೋಗ ಮಂದಿರದ ವಿದ್ಯಾ ಸಂಸ್ಥೆಯಲ್ಲಿ ಧಾರ್ಮಿಕ ವಿದ್ಯಾ ಕಲಿಸಿರಿ, ಇವರನ್ನೇ ಧರ್ಮ ಪೀಠಗಳಿಗೆ ಆರಿಸಿ ತೆಗೆದುಕೊಳ್ಳಬೇಕೆಂಬ ಠರಾವು ಭಕ್ತಸಮೂಹ

ದಿಂದಲೇ ಪಾಸಾಗಿ, ಇವಕ್ಕೆ ಟ್ರಸ್ಟ ಕಮೀಟಿ ಏರ್ಪಟ್ಟು, ಅದರ ಮುಖಾಂತರ ಈ ಧಾರ್ಮಿಕ ಸಂಸ್ಥೆ ನಡೆಯುತ್ತಿದ್ದು, ಇಲ್ಲಿ ಪರ್ಯಂತರ ಅದರಲ್ಲಿ ಗುರುಸ್ಥಲದ ಅಯ್ಯನವರ ಮಕ್ಕಳನ್ನೇ ವೀರಶೈವ ಧರ್ಮ ವಿದ್ಯಾ ಕಲಿಸುವ ಠರಾವಿನಂತೆ ನಡೆಯುತ್ತ ಬಂದಿರುತ್ತದೆ. ಈ ಧರ್ಮಸಂಸ್ಥೆಯಲ್ಲಿ ವಿದ್ಯೆ ಕಲಿತ ವಟು ಗಳನ್ನೇ ಧರ್ಮ ಪೀಠಕ್ಕೆ ಆರಿಸುತ್ತ ಬಂದಿದ್ದಾರೆ. ಇದು ಅಲ್ಲದೆ, ಸದ್ವಂಶ ಜರಾದ ಗುರುಸ್ಥಲಮಠದ ಮಾಹೇಶ್ವರರು ಕಾಶಿ, ಕಲಕತ್ತೆ ಮುಂತಾದ ವಿದ್ಯಾ ಪೀಠಗಳಲ್ಲಿ ಅಧ್ಯಯನ ಮಾಡಿ ಪದವೀಧರರಾದವರನ್ನೇ ಆರಿಸುತ್ತಾ ಬಂದಿರು ತ್ತಾರೆ.

ಶ್ಲೋಕ: ಆಚಾರ ಭೇದಾದೇತಸ್ಯಭೇದಃ ಸಂಕಥ್ಯತೇಧುನಾ । ಸಾಮಾನ್ಯಶೈವಂ ಪ್ರಥಮಂ ಮಿಶ್ರಶೈವಂ ತತಃ ಪರಂ । ಶುದ್ಧಶೈವಂ ತತೋಜ್ಞೇಯಂ ವೀರ ಶೈವಂ ತತಃ ಪರಂ ॥

ಎಂಬಂತೆ ಶುದ್ಧ ಶೈವಾದಿಗಳು ಶೈವ ಮತದ ಭೇದವೆಂದೇ ಪ್ರತಿಪಾದಿಸು ತ್ತದೆ. ವೀರಶೈವ ಮತದಲ್ಲಿ ಸಾಮಾನ್ಯ ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವ ಎಂದು ತ್ರಿವಿಧ ಭೇದವೇ ಸಕಲ ಶಿವಾಗಮಗಳಿಗೆ ಸಮ್ಮತ ವಾದದ್ದೆಂದು ತಿಳಿದು, ವೀರಶೈವ ಮಹಾಸಭೆಯವರು ಆಧಾರಸ್ತಂಭದಂತಿದ್ದ ಭಕ್ತರೇ— ಗುರುಸ್ಥಾನವು ನಮಗೆ ಯೋಗ್ಯವಲ್ಲ; ಗುರುಸ್ಥಲದ ಅಯ್ಯನವರೇ ನಮ್ಮ ಸಮಾಜದಲ್ಲಿ ಆದಿಯಿಂದಲೂ ಇದ್ದಾರೆ. ಅವರ ವಟುಗಳನ್ನೇ ಸುಧಾರಿ ಸಲು ಭಕ್ತಬಂಧುಗಳೇ ಶಿವಯೋಗ ಮಂದಿರವೆಂಬ ಗುರುಕುಲವಾಸವನ್ನು ಸ್ಥಾಪಿಸಿದ ಪುಣ್ಯವಂತ ಭಕ್ತರೇ ಬಸವೇಶ್ವರನ ವಂಶಿಕರೆಂದು ಹೇಳಬಲ್ಲೆ. ಆಗ ಸಮಾಜದಲ್ಲಿ ನಿಮ್ಮಂಥ ಭಕ್ತಾದಿಗಳಿದ್ದಿಲ್ಲವೇ? ಅವರೂ ಸಹ ಈ ಧರ್ಮವಿದ್ಯೆ ನಮಗೆ ಸಲ್ಲದೆಂದು ತಿಳಿದು, ಭಕ್ತಾದಿಗಳ ವಟುಗಳನ್ನು ಶಾಸ್ತ್ರರೀತಿಯಿಂದ ಆರಿಸಿ ಕೊಳ್ಳುವದು ಯೋಗ್ಯವಲ್ಲವೆಂದು ಬಿಟ್ಟಿದ್ದಾರೆ. ಅವರೆಲ್ಲರೂ ದಡ್ಡರು; ನೀವು ಬ್ಬರೇ ಪಂಡಿತರಲ್ಲಿಯ ದಡ್ಡರೆಂದು ಕಾಣುತ್ತದೆ. ಕೃತ್ರಿಮ ಕುಲದ ಮಠದಯ್ಯ ನವರ ಧರ್ಮ ಪೀಠಕ್ಕೆ ಆಶೆ ಮಾಡುವ ನಿಮ್ಮ ಇಬ್ಬದಿಗೆಯ ಕುಲವಾವದೋ ತಿಳಿಯದಾಗಿದೆ. ಶಿವಯೋಗಮಂದಿರದ ವಟುಗಳನ್ನು ಧರ್ಮ ಪೀಠಕ್ಕೆ ಆರಿಸು ವದು ವೀರಶೈವ ಧರ್ಮ ಸುಧಾರಣೆಗೆ ನಿಮ್ಮಂಥ ದುರಭಿಮಾನಿಗಳು ವಟು ಗಳನ್ನು ಆರಿಸುವದು ಮಾತ್ರ ಕೇವಲ ಭೋಗವಿಲಾಸಕ್ಕೆಂದು ತಿಳಿಯಿರಿ.

**ಪ್ರಶ್ನೆ:** ಈ ಮಹಾ ಪ್ರಮಾದವನ್ನು ತೀವ್ರ ತಿದ್ದಿಕೊಂಡು ಆ ಸಂಸ್ಥೆಯ ಕಲಂಕವನ್ನು ಈಗಿನ ಅದರ ಚಾಲಕರು ಕಳೆಯಲಿ; ಇಲ್ಲವೆ ವೀರಶೈವ ಮಹಾ ಸಭೆಯೂ ಸಮಾಜ ದುರಂಧರರೂ ಈ ಬಗ್ಗೆ ಅತ್ಯಾಸಕ್ತಿಯಿಂದ ಕಾರ್ಯ ತತ್ಪರರಾಗಲಿ.

**ಉತ್ತರ:** ನಂಜೇಶ ಕಾಲಜ್ಞಾನದಲ್ಲಿ:

ಪದ್ಯ: ಧರ್ಮ ಸಂಕರವಾಗಿ ಕರ್ಮಗಳು ಲೋಪಾಗಿ ।
ಧರ್ಮ ತತ್ವಗಳೆಲ್ಲ ಪೋಗುವವು ಜನರ ದುಷ್ಕರ್ಮ ನೋಡು ನಂಜೇಶಾ ॥

ಎಂಬಂತೆ ಇಂಥ ಜಾತಿಸಂಕರ, ಧರ್ಮಸಂಕರ ನಡೆಯಬಾರದೆಂದು ಹಿಂದಿನ ವೀರಶೈವ ಮಹಾಸಭೆಯವರು ಇಂಥ ಪ್ರಮಾದವಾಗಬಾರದೆಂದೇ,

ಶ್ಲೋಕ: ತ್ರಿವಿಧಂ ವೀರಶೈವಾಖ್ಯ ಮಧಿಕಾರವಿಭೇದತಃ । ಕೃತಂಮಯಾ ಪುರಾದೇವಿ ಭಕ್ತೋದ್ಧರಣ ಹೇತುವೆ । ಸಾಮಾನ್ಯಂ ವೀರಶೈವಂಚ ವಿಶೇಷಂಚ ತತಃ ಪರಂ । ನಿರಾಭಾರಂ ವೀರಶೈವಂ ಸತತೋಧಿಕ ಮೀಶ್ವರಿ ॥

ಅಂದರೆ ಹೇದೇವಿಯೇ, ಭಕ್ತೋದ್ಧಾರಣಕ್ಕಾಗಿ ಪೂರ್ವದಲ್ಲಿ ನನ್ನಿಂದ ವೀರಶೈವ ಮತದಲ್ಲಿ ಸಾಮಾನ್ಯ ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವ ಎಂದು ತ್ರಿವಿಧ ಭೇದವು ಮಾಡಲ್ಪಟ್ಟಿದೆ. ಅವರಲ್ಲಿ ಸಾಮಾನ್ಯ ವೀರ ಶೈವರಕ್ಕಿಂತಲೂ ವಿಶೇಷ ವೀರಶೈವರಧಿಕ; ವಿಶೇಷ ವೀರಶೈವರಕ್ಕಿಂತಲೂ ನಿರಾ ಭಾರಿ ವೀರಶೈವರಧಿಕ; ಇದಕ್ಕಿಂತಲೂ ಅಧಿಕವಾದದ್ದಿಲ್ಲವೆಂದು ಪಾರಮೇಶ್ವ ರಾಗಮ ವೀರಶೈವ ಮತದ ತ್ರಿಭೇದವನ್ನೇ ಹೇಳುತ್ತಿರುವದರಿಂದ:

ವಚನ: ಸುಡುವ ಅಗ್ನಿಕಾಷ್ಟದ ಇರುವು ಬಲ್ಲದೆ ಅಯ್ಯಾ । ಕೊರೆದು ಹರಿವ ಉದಕಗಿರಿಯ ಗರ್ವ ಬಲ್ಲದೆ ಅಯ್ಯಾ । ಮುರಿದು ತಿಂಬ ತೋಳ ಕುರಿಯ ಮರಿಯ ಜೇನೆಯ ಬಲ್ಲದೆ ಅಯ್ಯಾ । ತನ್ನ ಅವಸರಕ್ಕೆ ಆರನಾದರೂ ಸಂಧಿಸಿ ಬೇಧಿಸಿಕೊಂದಿಹನು ತಿಂದಿಹನು. ಎಂಬ ಅಸತ್ತಿನು ಸತ್ಯದ ಕುರುಬ ಬಲ್ಲನೆ ಮಹಾಲಿಂಗ ಗುರುಶಿವ ಶಿದ್ಧೇಶ್ವರ ಪ್ರಭುವೆ.

ಗುರುಸ್ಥಲದ ಮಠದಯ್ಯನವರು ನಮ್ಮ ಸಮಾಜದಲ್ಲಿ ಸನಾತನ ಧರ್ಮ ಗುರುಗಳಾದ್ದರಿಂದ ಈ ಧರ್ಮಶಾಸ್ತ್ರ ವಿದ್ಯೆಗೆ ಮಠದಯ್ಯನವರ ವಟುಗಳೇ

ಯೋಗ್ಯರೆಂದು ಅವರ ಚಾಲಕರು ಯೋಗ್ಯ ಜವುಕಸಿಮಾಡಿ ನಿರ್ಧರಿಸಿರುವರು. ಈಗ ಇದನ್ನು ನೀವು ಜಾತಿಸಂಕರ ಮಾಡಬೇಕೆಂದು ಹಟ ಹಿಡಿದರೆ "ಅಧರ್ಮವು ನಷ್ಟಸಂತಾನ। ಧರ್ಮಸಂತಾನ ವರ್ಧನಃ"। ಎಂಬಂತೆ ವೀರಶೈವ ಮಹಾಸಭೆಯ ಧರ್ಮಪಾಲಕರು ಮಾಡಿದ ನಿರ್ಣಯ "ಶರಣರೊಸೆದಹುದೆಂದು ಬಣ್ಣಿಸುವ ವರ್ತನೆ"ಯಂತೆ ಸತ್ಯವಿದ್ದು ಇವರ ವಿರುದ್ಧ ನಿಮ್ಮಂಥವರು ಪ್ರವಾಹದ ವಿರುದ್ಧ ಈಸಿ ಮುಳುಗಿ ಸತ್ತಂತೆಯೇ ಸರಿ. ಇಂಥವರ ಕೈಯಲ್ಲಿ ಧರ್ಮಗ್ರಂಥಗಳು ಸಿಕ್ಕರೆ ಇವುಗಳನ್ನು ಯಾವ ಸ್ಥಿತಿಗೆ ಒಯ್ಯುವರೋ ದೇವರೇ ಬಲ್ಲ. ಇದಕ್ಕೆ ನೀವು ಬರೆದ "ಕೊಟ್ಟೂರ ಬಸವೇಶ್ವರನ ಚರಿತ್ರವಲ್ಲಿ ಗುರುಲಿಂಗಜಂಗಮವೆಂಬ ಪೂರ್ವಿ ಸಾಂಪ್ರದಾಯವಲ್ಲಿದ್ದದ್ದನ್ನು ತಿದ್ದಿ, ಅಲ್ಲಿ ಭಕ್ತ-ಲಿಂಗ-ಜಂಗಮನೆಂದು ಹಾಕಿದ್ದೇ ಸಾಕ್ಷಿ.

**ಪ್ರಶ್ನೆ:** ಈ ಕೃತ್ರಿಮ ವರ್ಗದವರು ಹಲವರು ತಾವಾರೆಂದರಿಯದೇ ತಮ್ಮನ್ನು ಬ್ರಾಹ್ಮಣರೆಂದೂ ಇತರರು ಕ್ಷತ್ರಿಯ, ವೈಶ್ಯ, ಶೂದ್ರರೆಂದೂ ತಾವು ಜಾತರೆಂದೂ ಇತರರು ಅಜಾತರೆಂದೂ ತಾವೇ ಗುರುಜಂಗಮ ಸ್ಥಾನಗಳಿಗೆ ಸೂರ್ಯ-ಚಂದ್ರರಿರುವ ವರೆಗೆ ಇರಬೇಕೆಂದೂ ಗ್ರಂಥಗಳಲ್ಲಿ ಬರೆಯುತ್ತ, ಪುರಾಣ-ಪ್ರವಚನ-ಕೀರ್ತನಗಳಲ್ಲಿ ಹೇಳುತ್ತ ನಡೆದಿರುವರು. ಪೂಜ್ಯರು ಖಂಡಿಸದೇ ಮೌನವಾಗಿರುವದು ಶೋಭಿಸದು.

**ಉತ್ತರ:** ಗುರುಕುಲ ವಂಶವು ಗಂಡುಹೆಣ್ಣು ಕೂಡಿದ್ದು ಕೃತ್ರಿಮ ವರ್ಗವ್ವೇ ಸರಿ; ಆದರೆ ನಿಮ್ಮ ವಂಶವಲ್ಲಿ ಮಾತ್ರ ಕಲಿಕಾಲಕ್ಕನುಸರಿಸಿ ಸೃಷ್ಟಿ ನಿಯಮಕ್ಕೆ ವಿರೋಧವಾದ ಶುದ್ಧ ಸಂತಾನವಿರಬಹುದೆಂಬ ಸಂಶಯ ಬರುವಂತಿದೆ. ಯಾಕಂದರೆ ವಿಷ್ಣುವಿಗೆ ಅಧೋಕ್ಷಜನೆಂದು ಹೆಸರಿದ್ದು ನೀವಾದರೂ ಅದನ್ನನುಸರಿಸಿ ಹುಟ್ಟಿದವರಾಗಿರಬಹುದೇ? ತಿಳಿಯದಾಗಿದೆ. ಈಗ ವಂಶಪರಂಪರವಾಗಿ ಬಂದ ಮಠಗಳಿಗೆ ಮಠಸ್ಥರನ್ನೇ ಧರ್ಮಪೀಠಕ್ಕೆ ಆರಿಸಬೇಕೆಂದು, ಇವರೇ ಧರ್ಮವಿದ್ಯೆಗೆ ಯೋಗ್ಯರೆಂದು ಇವರಿಗೆ ವೀರಶೈವ ಲಿಂಗೀಬ್ರಾಹ್ಮಣರೆಂದು ಮಾಹೇಶ್ವರರೆಂದು ಪರ್ಯಾಯನಾಮದಿಂದ ಕರೆಯುವ ರೂಢಿಯಿದೆ.

ಶ್ಲೋಕ: ಅಪೌವರ್ಣಾ ಶ್ರಮಾಚಾರೋಗುರೌ ಬ್ರಹ್ಮಜ್ಞ ತಾಸ್ತಿಚೇತ್ ।
ಭಜೇತ್ತಮೇವ ಯತ್ನೇನನೋತೇದನ್ಯ ಗುರುಂ ವ್ರಜೇತ್ ॥

ಶಿಷ್ಯನು ಪ್ರಥಮದಲ್ಲಿ ವರ್ಣಾಶ್ರಮಾಚಾರವು ಗುರುವಿನಲ್ಲಿದ್ದು ಬ್ರಹ್ಮಜ್ಞಾತೆಯು ಇದ್ದರೆ ಅಂತಹ ಗುರುವನ್ನೇ ಯತ್ನ ಪೂರ್ವಕವಾಗಿ ಹೊಂದಬೇಕು ಎಂದು ನಿರೂಪಿಸಿವೆ ಹಾಗು ಕ್ರಿಯಾಸಾರದಲ್ಲಿ "ವರ್ಣಾಶ್ರಮ ಕ್ರಿಯಾನಿಷ್ಠೋ ಧರ್ಮ ವಿಚ್ಛಾಸ್ತ್ರ ಕೋವಿದಃ" ಎಂದೂ ಮತ್ತು ಶ್ರೀಕರ ಭಾಷ್ಯದ ೩೫೧ನೇ ಪುಟದಲ್ಲಿ:

ಶ್ಲೋಕ: ವಿದ್ಯಾಂಚಾ ವಿದ್ಯಾಂಚ ಯಸ್ತದ್ವೇದೋ ಭವಂ ಸಹ । ಅವಿದ್ಯಾಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಮೃತ ಮಶ್ನುತೇ । ಇತ್ಯಾದಿ ಶೃತಿಷು ವರ್ಣಾಶ್ರಮೋಚಿತಂ ಧರ್ಮ ವಿದ್ಯೇತಿ ನಿರೂಪ್ಯತೇ । ತಯಾ ಪ್ರಾಚೀನ ಕರ್ಮಾಣಿ ಹಿತ್ವಾ ಜ್ಞಾನಂ ಸಮಶ್ನುತೇ । ಜ್ಞಾನೇನ ಮುಕ್ತಿಮಾ ಪ್ನೋತಿ ತಸ್ಮಾತ್ಕರ್ಮ ಸಮಭ್ಯಸೇತ್ ॥

ಶ್ಲೋಕ: ಅಷ್ಟಾದಶಾನಾಂ ವರ್ಣಾನಾಂ । ಶ್ರೇಷ್ಠೋ ಮಹೇಶ್ವರೋ ಜನಃ ॥

ಈ ೧೮ ಪ್ರಕಾರದ ಜಾತಿಗಳ ಮಧ್ಯದಲ್ಲಿ ಮಾಹೇಶ್ವರ ಜನ್ಮವೇ ಶ್ರೇಷ್ಠ ಇವೇ ಮುಂತಾದ ವಚನ ಪ್ರಮಾಣ ಬೆಳೆಯಿಂದ ಪ್ರಾಣಿಗಳ ಮತ್ತು ವರ್ಣಗಳ ತಾರತಮ್ಯದಲ್ಲಿಯಾದರೂ ಮಾಹೇಶ್ವರ ಮುಂತಾದ ಪದವಾಚ್ಯರಾದ ಗುರುಸ್ಥಲದ ವೀರಶೈವರಿಗೇನೇ ಸರ್ವೋತ್ಕೃಷ್ಟವಾದ ಅಪ್ರಾಕೃತ ಬ್ರಾಹ್ಮಣ್ಯವೆಂಬುದು ಸಿದ್ಧಾಂತವು. ಗುರುಜಂಗಮ ಸ್ಥಾನಕ್ಕೆ ಸೂರ್ಯ–ಚಂದ್ರರಿರುವವರೆಗೂ ಗುರುಸ್ಥಲದ ಮಠದಯ್ಯನವರನ್ನು ಜಂಗಮ ಸ್ಥಾನಕ್ಕೆ ಶಾಶ್ವತಃ ಅಷ್ಟಾವರ್ಣಾಂತರ್ಗತ ಗುರುಜಂಗಮರೆಂದು ಮಠಸ್ಥಾಪಕರ ವಂಶಪರಂಪರವಾಗಿ ಬಂದವರನ್ನೇ ಆರಿಸಬೇಕೆಂಬ ನಿಯಮವಿದ್ದದರಿಂದ ಈ ಸ್ಥಾನಕ್ಕೆ ನಿಮ್ಮಂಥವರ ಮಕ್ಕಳನ್ನಾರಿಸಿದರೆ ಮಾತ್ರ ಕೃತ್ರಿಮವಾಗುವದರಿಂದ, ಆರಿಸಲು ಯಾವಾಗಲೂ ತ್ಯಾಜ್ಯವಾಗಿದೆ. ಬಸವಾದಿ ಪ್ರಮಥರು ಅದಿಅನಾದಿಯಿಂದಿದ್ದ ಗುರುಜಂಗಮರನ್ನು ಸಾಕ್ಷಾತ್ ಪರಶಿವನ ಪ್ರತಿನಿಧಿಗಳೆಂದು ಭಾವಿಸಿ, ಅದರಂತೆ ಹಾಡಿದ ವಚನ:

ವಚನ: ಭಕ್ತರು ರುದ್ರಗಣಂಗಳ ಮಠಕ್ಕೆ ಬಂದರೆ ಭೃತ್ಯನಾಗಿರಬೇಕು ಕರ್ತನಾಗಿ ಕಾಲು ತೊಳೆಯಿಸಿಕೊಂಡರೆ ಹಿಂದೆ ಮಾಡಿದ ಭಕ್ತಿ ಹಾನಿಯಪ್ಪದು ಲಕ್ಷ ಗಾವದ ಹೋಗಿಯಾದರೂ ಭಕ್ತನು ಗಣಂಗಳ ಕಾಂಬುದು ಸದಾಚಾರ । ಅಲ್ಲಿ ಕೂಡಿ ದಾಸೋಹಂ ಮಾಡಿ ಗುರು ಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವಂ ಕೊಟ್ಟು ಅಹಂಕಾರ ವಳಿದಂತ ಪುರಾತನರು ಮೆಟ್ಟುವ ಪಾದರಕ್ಷೆಗಳು ನನ್ನ ಮಸ್ತಕದ

ಮೇಲಿರಿಸಿಕೊಂಡು ನಾನು ಕೃತಾರ್ಥನಾದೆನಯ್ಯಾ ಗುರುಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರ ||

ಹೀಗಿರುವದರಿಂದ ನೀವು " ಶಬ್ದಜಾಲಂ ಮಹಾರಣ್ಯಂ ಚಿತ್ತ ಭ್ರಮಣ ಕಾರಣಃ " ಎಂದು ಶಾಸ್ತ್ರವನ್ನು ಶಾಸ್ತ್ರಾಭ್ಯಾಸಿಗಳನ್ನು ದೂಷಿಸುವದರಿಂದ ನೀವು ಶಾಸ್ತ್ರಗ್ರಂಥ ದೂಷಿತರೆಂಬ ಸ್ಪಷ್ಟವಾಗುತ್ತದೆ. ಶಾಸ್ತ್ರದಲ್ಲಿ ನಂಬಿಗೆ ಯಿಲ್ಲದವರೊಡನೆ ವಾಗ್ವಾದ ಬೆಳೆಸುವದಕ್ಕಿಂತ ಸುಮ್ಮನೆ ನಿಮ್ಮಂಥವರ ಬರ ಹಕ್ಕೆ ಬೆಲೆ ಕೊಡದೇ ಮೌನವಾಗಿರುವದು ಸಹಜವೇ ಸರಿ.

**ಪ್ರಶ್ನೆ:** ಭಕ್ತಾಪರಾಧವು ದೂರಾಗಿ ಸಕಲರಿಗೂ ಸಮಾನವಕಾಶವದಗಿ ನಿಜವಾಗಿ ಬಸವಾನುಯಾಯಿಗಳಾಗಿ ಸಕಲರೂ ತಮ್ಮ ತಮ್ಮ ಆತ್ಮೋನ್ನತಿ ಯನ್ನು ಸಾಧಿಸಲಿ.

**ಉತ್ತರ:**

ಶ್ಲೋಕ: ಶಿವತಾಭರಿತೇ ಭುವನತ್ರಿತಯೇ | ಶಿವತಾಂಜನತಾ ನ ತಥಾಪಿಗತಾ ||
ಗುರುದರ್ಶನ ತಶ್ಶಿವತಾ ಮುಗಮತ್ | ಗುರುತಶ್ಶಿವತೋ ಗುರುದೇವ ಗುರುಃ ||

ಈ ಮೂರೂ ಲೋಕವು ಶಿವಸ್ವರೂಪದಿಂದ ತೋರುತ್ತಿದ್ದರೂ ಜನಗಳು ಶಿವತ್ವವನ್ನು ಹೊಂದುವದಿಲ್ಲ. ಆದರೆ ಗುರು ದರ್ಶನದಿಂದ ಶಿವತ್ವವನ್ನು ಹೊಂದುವನು. ಆದ್ದರಿಂದ ಗುರು-ಶಿವ ಇವರೀರ್ವರಲ್ಲಿ ಗುರುವೇ ಅಧಿಕ ನಾಗುವನು.

ಶ್ಲೋಕ: ಬ್ರಹ್ಮಾದಿನಾಂ ಮಹರ್ಷಿಣಾಂ ಮನುಷ್ಯಾಣಾಂ ಮುಕ್ತಿರೇಕ | ಬ್ರಹ್ಮಮೇಕಂ
ಬ್ರಾಹ್ಮಣತ್ವ ಮೇಕಂ | ವರ್ಣಾಶ್ರಮಧರ್ಮ ಪೃಥಕ್ | ಪೃಥಕ್ ||

ಎಂಬಂತೆ ವೀರಶೈವರಲ್ಲಿಯಾಗಲಿ ಮತ್ತಾರಲ್ಲಿಯಾಗಲಿ ವರ್ಣಾಶ್ರಮ ಧರ್ಮಗಳು ಬೇರೆ ಬೇರೆ ಇರುವದರಿಂದ ಭಕ್ತರ ಮೇಲೆ ಯಾರೂ ಅಪರಾಧ ಮಾಡಿಲ್ಲ. ಶಾಸ್ತ್ರ ಪದ್ಧತಿ ಪ್ರಕಾರ ಗುರುಗಳಿಗೂ ಜಂಗಮರಿಗೂ ಭಕ್ತ ರಿಗೂ ಅಷ್ಟಾವರ್ಣ ಒಂದೇ ಸಮಾನಾವಕಾಶವನ್ನೊದಗಿಸಿ ಕೊಟ್ಟಾಗ್ಯೂ ಶರೀರ ಧರ್ಮ ಒಂದೇ ಇದ್ದಾಗ್ಯೂ ಪೂರ್ವಜರು ನಿರ್ಮಿಸಿದ ವರ್ಣಾಶ್ರಮ ಧರ್ಮ ಪದ್ಧತಿ ಪ್ರಕಾರ ಗುರುಲಿಂಗಜಂಗಮಕ್ಕೆ ಪೂಜ್ಯತ್ವವನ್ನೂ ಭಕ್ತನಿಗೆ

ಪೂಜಕತ್ವವನ್ನೂ ಪೂರ್ವಜರು ನಿರ್ಣಯಿಸಿದಂತೆ ಬಸವಾದಿ ಪ್ರಮಥರು ನಡೆದ ರಲ್ಲದೆ ವೈಲಾರ ಬಸವಲಿಂಗ ಶರಣರು ತಮ್ಮ ಗುರುಕರುಣ ತ್ರಿವಿಧಿಯಲ್ಲಿ:

ಪದ್ಯ: ಗುರುವೇ ಭಕ್ತರಕಲ್ಪ ತರುವೇ ಸಜ್ಜನ ಮನೋಹರನೇ । ನಿಜಭಕ್ತಿ ಜ್ಞಾನ – ವೈರಾಗ್ಯ ಮಂದಿರವೇ ಮದ್ಗುರುವೇ ಕೃಪೆಯಾಗು ॥ ಸುರಧೇನು ಆಕಳಲ್ಲ । ಸುರತರು ಮರನಲ್ಲ ಪರುಷ ಶಿಲೆ ಅಲ್ಲ । ಚರಲಿಂಗ ನರನಲ್ಲೆಂದೊರೆದ ಶ್ರೀ ಗುರುವೇ ಕೃಪೆಯಾಗು ॥

ಹೀಗೆ ಪೂರ್ವಜರು ಪೂಜ್ಯ, ಪೂಜಕತ್ವ ನಿರ್ಣಯಿಸಿ ಧರ್ಮ ಕಾಯುದೆ ಮಾಡಿಟ್ಟಿದ್ದಾರೆ. ಅದರಂತೆ ನೀವು ನಡೆದು ಬಸವಾನುಯಾಯಿಗಳಂತೆ ನಿಮ್ಮ ಆತ್ಮೋನ್ನತಿ ಸಾಧಿಸಿಕೊಳ್ಳಿರಿ.

**ಪ್ರಶ್ನೆ:** ಕಾಕೀಕೋಟಿ ಮಲ್ಲಿಕಾರ್ಜುನಪ್ಪನವರು ೬–೯–೧೯೩೬ನೇ ದಿನಾಂಕಕ್ಕೆ ಹೊರಡಿಸಿದ ಪ್ರಕಟನೆಯ ಆಧಾರದಿಂದ ರಸಿಕರಂಜನಿ ಪ್ರೆಸ್ಸಿನಲ್ಲಿ ಮುದ್ರಿಸಿ ಪ್ರಕಟಿಸಿದ ವೀರಶೈವ ಮಾತ್ರರೆಲ್ಲ ಗುರುಜಂಗಮ ಅಧಿಕಾರಿಗೆ ಅರ್ಹ ರೆಂಬ ಪ್ರಕಟನೆಯಲ್ಲಿ ಗುರುಸ್ಥಲದ ಮಠಪಯ್ಯನವರ ಭಕ್ತರ ಬೀಗತನದ ಖಾನೇಸುಮಾರಿ ತಪಾಸಮಾಡಿದ ಲೆಕ್ಕ, ಭಕ್ತರ ಪಟಗಳನ್ನು ಗುರು, ಲಿಂಗ, ಜಂಗಮರ ಮಠಸ್ಥಾನಗಳಿಗೆ ಅರಿಸಿದ ಲೆಕ್ಕಗಳನ್ನು ಕೊಟ್ಟು ಭಕ್ತರಾದ ನೀವು ಅನಾದಿ ಗುರುಜಂಗಮರ ಸರಿಸಮಾನರಾಗುವ ಕುರಿತು— ಬರೆದಿದ್ದೀರಿ.

**ಉತ್ತರ:** ಗುರುಸ್ಥಲ, ಜಂಗಮಸ್ಥಲ ಮಠಗಳಿಗೆ ಕಾಮ್ಯಕರ್ಮಗಳಿಂದ ಸೇವಿಸಲ್ಪಟ್ಟ ಭಕ್ತಾದಿಗಳಿಗೆ ಶಿವಯೋಗಿಗಳು ಅಂತಃಕರಣ ಆಶೀರ್ವಾದದಿಂದ ಕೊಟ್ಟ ಉತ್ತತ್ತಿ ಹಣ್ಣುಗಳನ್ನು ಸೇವಿಸಿದ್ದರಿಂದ ಶಿವಯೋಗಿಯ ಅಂತರಂಗ ದಲ್ಲಿಯ ಆಶೀರ್ವಾದವು ಭಕ್ತನ ಹೃದಯಾಂತರಾಳದಲ್ಲಿ ಪ್ರವೇಶಿಸಿ, ವಿರಾಜಿಸುತ್ತ, ಸುಷುಮ್ನಾಂತರ ತೇಜೋಮಯವಾಗಿರುವ ಚಿದ್ಬಿಂದುವೇ ಅಧೋಮಾರ್ಗದಿಂದಿಳಿದು, ರೇತಸ್ಸಿನ ರೂಪವೆನಿಸುತ್ತ, ತನ್ನ ಸ್ತ್ರೀಯಳ ಗರ್ಭಕೋಶಕ್ಕೆ ಪ್ರವೇಶಿಸಿ, ಹುಟ್ಟಿದ ಶಿಶು ಗುರುವಿನ ಆಶೀರ್ವಾದದಿಂದ ಬೆಳೆದು, ಗುರುಕುಲವಾಸದಲ್ಲಿ ಅಭ್ಯಾಸಮಾಡಿ, ಗುರುವಿನಿಂದ ದೀಕ್ಷಾ ಸಂಸ್ಕಾರ ಹೊಂದಿ, ಷಟ್‌ಸ್ಥಲಕ್ಕೆ ಬರಬೇಕಾದರೆ ಭಕ್ತನ ರಕ್ತಾಂಶ ಸುಟ್ಟು ಗುರುವಂಶವೇ ಸಿದ್ಧವಾಗುವದಲ್ಲದೆ ಭಕ್ತನ ವಂಶವು ಉಳಿಯದೆಂದು ಗ್ರಹಿಸಿರಿ.

ವಚನ: ಮಣ್ಣಿನಲ್ಲಿ ಹುಟ್ಟಿದ್ದು ಹೊನ್ನು ! ಕಲ್ಲಿನಲ್ಲಿ ಹುಟ್ಟಿದ್ದು ರನ್ನ ! ಚಿಪ್ಪಿನಲ್ಲಿ ಹುಟ್ಟಿದ್ದು ಮುತ್ತು ! ವೃಕ್ಷದಲ್ಲಿ ಹುಟ್ಟಿದ್ದು ಗಂಧ ! ಅವು ತಮ್ಮ ಸ್ಥಾನಗಳ ಮೀರಿ ಪರಸ್ಥಾನದಲ್ಲಿ ನಿಂದು ! ಪ್ರಾಪ್ತನೆನಿಸುವಂತೆ ಪಿಂಡಾಂಡದಲ್ಲಿ ಹುಟ್ಟಿ ಅಂಡಜನಸತಿಗಳೆದು ನಿಜಪಿಂಡವನಾದಂತೆ ಗುರುವಿನ ಕರಕಮಲದಲ್ಲಿ ಹುಟ್ಟಿ ಲಿಂಗಮೂರ್ತಿಯ ಸರ್ವಾಂಗದಲ್ಲಿ ಬೆಳೆದು ಜಂಗಮದಪ್ಪ ನಿರಂಜನ ಪ್ರಸಾದದಲ್ಲಿ ಬೆಳೆದು ಅವಿರಳನಾದವಂಗೆ ಬಂಧ, ಮೋಕ್ಷ, ಕರ್ಮಂಗಳೆಂಬುವವಕ್ಕೆ ಸಲ್ಲ ಅದು ನಿರಂಜನವಸ್ತು ಶಂಭುವಿಗಿಂದತ್ತ ಅಲೆಬಳ ನೋಡಾ ಮಾತುಳುಂಗ ಮಧುಕೇಶ್ವರಾ !

ತಾತ್ಪರ್ಯ: ಕಲ್ಲಿನಲ್ಲಿ ಹುಟ್ಟಿದ್ದು ರನ್ನ ಮರಳಿ ಕಲ್ಲಾಗಬಲ್ಲದೇ ? ಶಿಂಪಿನಲ್ಲಿ ಹುಟ್ಟಿದ್ದು ಮುತ್ತು ಮರಳಿ ಸಿಂಪಿ ಆಗಬಲ್ಲದೇ ? ಅದರಂತೆ ಗುರುಕರಜಾತ ಅಂದರೆ ಗುರುವಿನ ಕೃಪಾಕಟಾಕ್ಷ ಬಲದಿಂದ ಭಕ್ತರಲ್ಲಿ ಹುಟ್ಟಿದ ಮಾತ್ರಕ್ಕೆ ಶಿಶುವು ಮರಳಿ ಭಕ್ತನಾಗಲಾರನು. ಮನೆಯಲ್ಲಿ ಹುಟ್ಟಿದ ಹೆಣ್ಣನ್ನು ಮದುವೆ ಮಾಡಿ ಕೊಟ್ಟಮೇಲೆ ಆಕೆಯು ತನ್ನ ಗಂಡನ ಮನೆಯ ಹೆಸರು ಹೇಳುವಳಲ್ಲದೆ ತವರು ಮನೆಯ ಹೆಸರು ಹೇಳುವದಿಲ್ಲ. ಭಕ್ತರಮನೆಯಲ್ಲಿ ಹುಟ್ಟಿದ ಹೆಣ್ಣು ದೀಕ್ಷಾ ಸಂಸ್ಕಾರ ಹೊಂದಿ ಲಗ್ನವಾದ ಬಳಿಕ ಭಕ್ತರ ಹೆಸರು ಉಳಿಯಲಾರದು. ಮೈಲಾರ ಬಸವಲಿಂಗ ಶರಣರ " ಶಿವಾನುಭವ ದರ್ಪಣ " ಪದ್ಯ (೩೩)ರಲ್ಲಿ:

ವಚನ: ಗುರುಲಿಂಗಜಂಗಮರ ಶರೀರಮನೋಭಾವದೊಳು ಕರದಿಷ್ಟಪ್ರಾಣ
ಭಾವಂಗಳಾಗಿ ಧರಿಸಿ ! ತ್ರೈಲಿಂಗದೊಡನೆ ಪಿರಿದ ಶರಣಂಗೆ ನರ
ಮನುಜರೆಂದು ಕಲ್ಪಿಸಬಾರದು ॥ ೧ ॥
ಸ್ವಾತೀಜಲ ಮುತ್ತು ತಾನೇತರೊಳಗಿರ್ದಡೆಯು ! ನೀತಿ ತಪ್ಪಿ ಮರಳಿ
ನೀರಪ್ಪುವವೇ ? ಜ್ಯಾತಿ ಶರಣಂಗೆ ವಿಭೂತಿ ವೀಕ್ಷ್ಯವ ಮಾಡಿ ಭೂತಳ
ದೊಳಳಿಯೇ ಮಾನವನಪ್ಪನೇ ॥ ೨ ॥
ಕ್ಷೀರದಿಂದಾದ ಘೃತ ಕ್ಷೀರ ಒಪ್ಪುದೇ ಮರಳಿ ! ಸಾರಿ ಹೇಳುವೆನು
ಕೇಳಾ ಪರಿಯೊಳು ! ಚಾರು ನಡೆನುಡಿ ಚನ್ನವೀರಮದ್ಗುರುವರನ
ಕಾರುಣ್ಯ ಪಡೆದು ಜಡಮತಿಯಪ್ಪರೇ ? ॥ ೩ ॥

**ಪ್ರಶ್ನೆ:** ದಾನಕ್ಕೂ ಸಂತೃಪ್ತಿಗೂ ಗುರುಜಂಗಮ ಪೀಠಕ್ಕೂ ಧಾರ್ಮಿಕ ವಿದ್ಯೆಗೂ ಧರ್ಮಬೋಧೆಗೂ ಇತ್ಯಾದಿ ಎಲ್ಲ ಕಾರ್ಯಗಳಿಗೂ ಮಾಹೇಶ್ವರ ರೆಂಬ ಅಡ್ಡ ಹೆಸರಿನವರಷ್ಟೇ ಹಕ್ಕುದಾರರೋ?

**ಉತ್ತರ:** ಇವುಗಳೆಲ್ಲಕ್ಕೂ ವೀರಶೈವ ಧರ್ಮಶಾಸ್ತ್ರ ಪದ್ಧತಿ ಪ್ರಕಾರ ಗುರುಸ್ಥಲದ ಮಠದಯ್ಯನವರು, ಚರಪಟ್ಟಾಧ್ಯಕ್ಷರು, ವಿರಕ್ತ ಮಠದ ನಿರಂಜನ ಜಂಗಮ ಮೂರ್ತಿಗಳು ದಾನ ತೆಗೆದುಕೊಳ್ಳಲಿಕ್ಕೂ ಅತಿಥಿಯಾಗಿ ಭಕ್ತರಿಂದ ತೃಪ್ತಿ ಹೊಂದಲಿಕ್ಕೂ ಯೋಗ್ಯರೆಂದು ವೀರಶೈವ ಸಮಾಜಾದಿ ಭಕ್ತಾದಿಗಳು ಗುರುಲಿಂಗಜಂಗಮಕ್ಕೆ ದಾನ, ದಕ್ಷಿಣೆ, ಕಾಣಿಕಾ, ವೃತ್ತಿವೇಣಿಗೆ, ನೇಮಣೂಕ ಇವುಗಳನ್ನು ಹಾಕಿಕೊಡುವ ಪದ್ಧತಿ ಗುರುಮೂರ್ತಿಗಳಿಗೆ ರಾಜಾಧಿರಾಜರು, ಸಕಲ ಭಕ್ತರು ಅಲ್ಲದೆ ಪರಮತೀಯ ಭಕ್ತರೂ ಸಹ ಮಠಾಧಿಕಾರಿಗಳೇ ದಾನ ಧರ್ಮಗಳಿಗೆ ಕರ್ತರೆಂದು ಹಿಂದಿನ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಅವುಗಳಲ್ಲಿ ಒಂದನ್ನು ಈ ಕೆಳಗೆ ಕೊಟ್ಟಿದೆ ನೋಡಿರಿ. ಸೂಕ್ಷ್ಮಾಗಮ ಪಟಲ ೭, ಶ್ಲೋಕ ೮೫ರಲ್ಲಿ:

ಶ್ಲೋಕ: ನ ವಸ್ತು ಸಂಗ್ರಹಂ ಕೂರ್ಯಾತ್ವಚಿ ಕುತ್ರಾಪಿ ಜಂಗಮಃ ।
ದತ್ತಂ ದದ್ಯಾಚ್ಚ ಭಕ್ತೇಭ್ಯೋ ದರಿದ್ರೇಭ್ಯೋ ದಯಾನ್ವಿತಃ ॥

ಭಕ್ತನಿಗೋಸ್ಕರ, ದರಿದ್ರನಿಗೋಸ್ಕರ ಹಣದ ವಿನಿಯೋಗವಾಗತಕ್ಕ ದ್ದೆಂದು ಹೇಳಲ್ಪಟ್ಟಿವೆ. ಋಗ್ವೇದ ೧— ೧೨೫–೫–೬ ಇದರ ಭಾಷಾಂತ ರವನ್ನು ಮ್ಯಾಕ್ಸಮುಲ್ಲರರು ಮಾಡಿದ್ದು ಏನೆಂದರೆ: ದಾನಕೊಡುವವನು ಸ್ವರ್ಗದಲ್ಲಿಯ ಶ್ರೇಷ್ಠ ಸ್ಥಳಕ್ಕೆ ಹೋಗುತ್ತಾನೆ. ಋಗ್ವೇದದ ಭಾಷಾಂತರದ ೨ನೇ ಭಾಗದಲ್ಲಿ ಲಂಡನ್ ೧೮೫೪ (ಪುಟ ೧೫–೧೬) ವಿಲ್ಸನ್ ಸಾಹೇಬರು ಇದೇ ಅರ್ಥವನ್ನು ಮಾಡಿದ್ದಾರೆ.

ವೀರಶೈವ ಧರ್ಮ ಗುರುಗಳಾದ ಮಠಾಧಿಕಾರಿಗಳು ಸಾಕ್ಷಾತ್ ಶಿವ ನೆಂದೇ ಭಾವಿಸಲ್ಪಡಬೇಕೆಂದು ಬರೆದಿದಾರೆ. ಬಸವೇಶ್ವರನ ವಚನ ನೋಡಿರಿ.

ವಚನ: ದ್ವಿಜರಿಗೆ ಕೊಟ್ಟು ಹಲವರು ಕೆಟ್ಟರು । ಉದ್ಧರಿಸುವನೊಬ್ಬ ಜಂಗ ಮಕ್ಕೆ ಕೊಡಿರಿ । ವಿಷ್ಣುವು ಬ್ರಾಹ್ಮಣನಾಗಿ ಬಂದು ಬಲಿಯ ಭೂದಾ ನವ ಬೇಡಿದ ಕೊಟ್ಟ ಬಲಿಯು ಭವಬಂಧನಕ್ಕೆ ಸಿಕ್ಕಿದ । ಈಶ್ವರ

ಜಂಗಮವಾಗಿ ಬಂದು ದಾಸಯ್ಯನ ವಸ್ತ್ರ ಬೇಡೆ ಕೊಟ್ಟ ದಾಸಯ್ಯನಿಗೆ ತವನಿಧಿಯನಿತ್ತ ! ವಿಷ್ಣು ಕಪಟ ಹಾರುವನಾಗಿ ಬಂದು ಕರ್ಣನ ಕವಚವ ಬೇಡಿದ। ಕೊಟ್ಟ ಕರ್ಣ ಕಾಳಗದಲ್ಲಿ ಮಡಿದ। ಕಾಮಾರಿ ಜಂಗಮವಾಗಿ ಬಂದು। ಶಿರಿಯಾಳ ಸೆಟ್ಟಿಯು ಮಗನ ಬೇಡಿದರೆ ಕೊಟ್ಟ ಶಿರಿಯಾಳ ಶೆಟ್ಟಿಯು ಕಾಂಚಪುರವ ಕೈಲಾಸಕ್ಕೊಯ್ದ ! ವಿಷ್ಣುವು ನಾರಾಯಣನಾಗಿ ಬಂದು ನಾಗಾರ್ಜುನನ ಶಿರವ ಬೇಡಿದ। ಕೊಟ್ಟ ನಾಗಾರ್ಜುನನ ಶಿರವು ಹೋಯಿತು। ಶಿವನು ಜಂಗಮನಾಗಿ ಬಂದು ಸಿಂಧು ಬಲ್ಲಾಳನ ವಧುವ ಬೇಡಿದ ಕೊಟ್ಟ ಬಲ್ಲಾಳ ಸ್ವಯಂ ಲಿಂಗವಾದ ಇಹದಲ್ಲಿ ಲೇಸು ಕೊಡಿರಿ ಕೂಡಲಸಂಗನ ಶರಣರಿಗೆ ||

ಹೀಗೆ ಜಂಗಮಕ್ಕೆ ದಾನ ಕೊಡಿರೆಂದು ಬಸವಣ್ಣನವರು ಹೇಳಿದ್ದಲ್ಲದೇ ನಂಜಣಾಚಾರ್ಯನು ತನ್ನ "ವೇದಾಂತಸಾರ ಚಿಂತಾಮಣಿ"ಯ ಉತ್ತರಖಂಡ (೧೦೦) ಪ್ರಕರಣ (೪೨) (೪೮) ನೇ ಶ್ಲೋಕದಲ್ಲಿ ಗುರುಪೂಜೆಯು ಭಕ್ತಾದಿಗಳಿಗೆ ಮಹಾಯಜ್ಞಗಳಲ್ಲಿ ಇಂದು ಒಂದಾಗಿದೆ ಎಂದು ಹೇಳಿರುವರು. ಇದೇ ಅರ್ಥವು "ಆಪಸ್ತಂಭ ಧರ್ಮಸೂತ್ರ"ದಲ್ಲಿ ಸೂಚಿಸಲ್ಪಟ್ಟಿದೆ.

"ಮ್ಯುಲ್ಲರರ ಸೆಕ್ರೇಡ್ ಬುಕ್ಸ ಆಪ್ ದಿ ಈಸ್ಟ" ಭಾಗ ೨ ಪುಟ (೧೧೬-೧೧೭) ನೋಡಿರಿ. ಮನುಸ್ಮೃತಿ ಆಸನಾ ಶಯನ ಯಾಭಿರಬ್ದ ಮೂರ್ತೀಫಲೇನವಾ। ನಾಸ್ಯಕಶ್ಚಿದ್ವಸೆದ್ಗೆಹೆ ಶಕ್ತಿನೋನರ್ಚಿ ತೋತಿಥಿಃ ||

ಎಂದು ಹೇಳಿದ್ದಾರೆ. ನಂಜಣಾಚಾರ್ಯರು ಹೇಳಿರುವದೇನಂದರೆ--

ಶ್ಲೋಕ: ಗೃಹಮಾಯಾಂತ ಮಾಲೋಕ್ಯ ಗುರುಂ ವಾ ಗುರುಮೇವ ಚ। ಭೋಗ್ಯಹೀ ಭವತೇ ನಮಃ ಸಗುರುರ್ನೇತರಃ ಕ್ವಚಿತ್ ॥ ತವಾಗತಂ ಗೃಹೇ ವೀಕ್ಷ್ಯ ಪ್ರತ್ಯುಸ್ಥಾಯಾಭಿ ವಾದಯಾತ್। ಕ್ರಿಯಾಪನೋಪಸಂ ಕೂರ್ಯಾರ್ಯ ಜನಾದಿಭಿರಾದರಾಯೇತ್। ಪ್ರಣಮ್ಯಸ್ವಾಗತಂ ಭ್ರೂಯಾತ್ಪಾದಪ್ರಕ್ಷಾಲನಂ ಚರೇತ್। ಪ್ರಥಮಂ ಪೂಜಯೇದ್ಗಂಧಂ ಪುಷ್ಪೈಃ ಸಂಕ್ಷಾಲಯೇತ್ತತಃ।

ಇದರಲ್ಲಿರುವ 'ಪೂಜಯೇತ್' 'ಸಮರ್ಚಯೇತ್' ಎಂಬ ಶಬ್ದಗಳಿಂದ ಗುರುಜಂಗಮರು ಈಶ್ವರನೆಂದೇ ಭಾವಿಸಲ್ಪಟ್ಟದ್ದು ತಿಳಿಯುತ್ತದೆ. ಮತ್ತು ಗುರುಜಂಗಮರ ಪೂಜೆಯು ವೀರಶೈವ ಭಕ್ತಾದಿಗಳಿಗೆ ಒಂದು ದೈವಿಕ ಕ್ರಿಯೆಯು

ಆಗಿರುತ್ತದೆ. ಸಿದ್ಧಾಂತ ಶಿಖಾಮಣಿಯ ಭಾಗ ೧, ಪರಿಚ್ಛೇದ ೯, ಶ್ಲೋಕ ೬, ಪುಟ ೧೬೩ ಇದರಲ್ಲಿ ಹೇಳಲ್ಪಟ್ಟಿರುವದೇನೆಂದರೆ;

ಶ್ಲೋಕ: ಸಹಜಂ ದಾನ ಮುತ್ಕೃಷ್ಟಂ ಸರ್ವದಾನೊತ್ತುಮೋತ್ತಮಂ । ಶಿವಜ್ಞಾನ ಪ್ರದಂಪುಂಸಾಂ ಜನ್ಮರೋಗ ನಿವರ್ತಿತಂ ॥

ಇದರಲ್ಲಿ ಸಹಜದಾನವು ಅತ್ಯುತ್ತಮತರದ್ದೆಂದು ಹೇಳಿದೆ. ಅದೇ ಗ್ರಂಥದ ಭಾಗ ೧, ಪರಿಚ್ಛೇದ ೯, ಪುಟ ೧೬೪, ಶ್ಲೋಕ ೧೧ ವೀರಶೈವರಲ್ಲಿ ಜಂಗಮನೇ ಯೋಗ್ಯನೆಂದು ಹೇಳಿದೆ. ಅವನೇ ವೀರಶೈವ ಭಕ್ತಾದಿಗಳಿಗೆ ಆಧ್ಯಾತ್ಮಿಕ ಗುರುಗಳು ಆಗಿರುವರು. ಇನ್ನು "ವೇದಾಂತ ಸಾರ ವೀರಶೈವ ಚಿಂತಾಮಣಿ" ಉತ್ತರಖಾಂಡ ಪ್ರಕರಣ ೧೨, ಶ್ಲೋಕ ೧೩, ೧೪, ಪುಟ ೨೪೦ ನೋಡಿರಿ. ಗುರುಜಂಗಮರ ಅಧಿಕಾರ ಮತ್ತು ಅವರ ಕಾರ್ಯ ಹೇಗೆ ಇರಬೇಕೆಂಬ ಬಗ್ಗೆ ಸೂಕ್ಷ್ಮಾಗಮ ಪಟಲ ೫, ಶ್ಲೋಕ ೬ ನೋಡಿರಿ.

ಶ್ಲೋಕ: ಅಧೀತ ವೇದವೇದಾಂಗಃ ಸರ್ವಸ್ಮೃತಿ ಷುಕೋವಿದಃ । ಪುರಾಣ ಸಂಹಿತಾ ವಕ್ತಾ ತದರ್ಥ ಪ್ರತಿಪಾದಕಃ ।

ವಚನ: ಆಯತ ಸ್ವಾಯತ ಅನುಭಾವದ ನಾನೆತ್ತಬಲ್ಲೆನಯ್ಯಾ । ಗುರುಲಿಂಗ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನವಂ ಸಮರ್ಪಿಸಿ ಅಹಂಕಾರ ಅಳಿದಂತಾ ಪುರಾತನರ ಮನೆಯ ಭೃತ್ಯರ ಭೃತ್ಯ ನಾಗಿಪ್ಪೆನಯ್ಯಾ । ಇದು ಕಾರಣ ಚನ್ನಮಲ್ಲಿಕಾರ್ಜುನ ಗಣಂಗಳಲ್ಲದನ್ಯವ ನಾನರಿಯ ನಯ್ಯಾ ॥

ಹೀಗೆ ಪುರಾತನರ ಗ್ರಂಥಗಳನ್ನು ನೋಡಿದರೆ ಗುರುಜಂಗಮರಿಗೆ ದಾನ ಕೊಡಬೇಕೆಂಬ ಪದ್ಧತಿ ಮಠ ಹುಟ್ಟಿದಾಗಿನಿಂದಲೂ ಬಂದಿರುತ್ತದೆ. ಪ್ರಾಚೀನ ಕಾಲದಿಂದ ಗುರುಜಂಗಮರೇ ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಶಿಕ್ಷಣ ಕೊಟ್ಟು ಪುರಾಣ, ಪ್ರವಚನ ಹೇಳಿ ಭಕ್ತರನ್ನು ಸುಧಾರಿಸುವ ಕಾರ್ಯವೂ ಗುರುಸ್ಥಲದ ಮಠದವರಿಗೆ ದಾನ, ಧರ್ಮ, ನೇಮಣೂಕ, ಕೊಡುವ ಪದ್ಧತಿಯು ಇಲ್ಲಿಯವರೆಗೂ ಅವ್ಯಾಹತವಾಗಿ ನಡೆದು ಬಂದಿದೆ.

ಈಗ ಗುರುಕುಲದವರನ್ನು ನಾಶಗೊಳಿಸಿ ಗುರುಜಂಗಮ ಪೀಠಕ್ಕೆ ಭಕ್ತ ಕುಲದವರನ್ನೇ ಆರಿಸಿ ತರಬೇಕೆಂಬ ನಿಮ್ಮ ದುಷ್ಟ ದುರಾಲೋಚನೆಯನ್ನು ಕಿತ್ತು

ಕಲ್ಲಿ, ಬಸವಾದಿ ಪ್ರಮಥರು ಭಕ್ತಿಮಾರ್ಗದಿಂದ ನಡೆದುಕೊಂಡಂತೆ ನೀವು ನಡೆದುಕೊಂಡು ಮುಕ್ತರಾಗಿರಿ. ಪಾಟೀಲರೆಂಬ ಅಡ್ಡ ಹೆಸರು ನಿಮಗೆ ಇದ್ದಂತೆ ಮಾಹೇಶ್ವರರೆಂಬ ಅಡ್ಡಹೆಸರು ಇವರಿಗೂ ಅದೆ. ಮೈಲಾರ ಶರಣರು ಹಾಡಿ ರುವದನ್ನು ನೋಡಿರಿ.

ಪದ್ಯ: ಭೂಮಿಯನು ಗುರುವಿಂಗೆ ಮಠವ ಕಟ್ಟಿಸಿಕೊಟ್ಟು ಕಾಮಿನಿಯ ಲಿಂಗಕ್ಕೆ ಭೋಗಸೌಖ್ಯಕಿತ್ತು ! ಹೇಮವನು ಜಂಗಮಾರ್ಚನೆಗೆ ಸವೆಸುತ್ತಿಹುದು ನಿಜತವಹುದಂತಲ್ಲದೆ । ಹೇಮವಂ ಗುರುವಿಂಗೆ ಜರಕೆ ಕಾಮಿನಿಯಂ ಸುಭೂಮಿಯನು । ಲಿಂಗಕ್ಕೆ ಕೊಡುವುದಲ್ಲದರಿಂದೆ ನೇಮದಿಂದವರ ವರ ಪ್ರೊಡೆಯರೊಡವಿಯ ಕೊಡಲ್ ತಕ್ಕುದೆ ಸದಾಚಾರವು ॥

**ಪ್ರಶ್ನೆ:** ವೀರಶೈವರಿಗೂ ವೇದಾಗಮಗಳನ್ನು ಸಾಮಾನ್ಯವಾಗಿ ಮನ್ನಿಸಿ ದರೂ ಸಂಪೂರ್ಣವಾಗಿ ಮನ್ನಿಸುವದಿಲ್ಲ. ಪ್ರಸಂಗ ವಿಶೇಷಗಳಲ್ಲಿ ಅವುಗಳನ್ನು ಶಿವಾನುಭವಿಗಳು ಖಂಡಿಸಿರುವರು.

**ಉತ್ತರ:**

ಶ್ಲೋಕ: ಪಿಂಡೇ ಪಿಂಡೇ ಮತಿ ಮತಿರ್ಭಿನ್ನಾಂ ಕುಂಡೇ ಕುಂಡೇನವಂ ಪಯಂ ।
ಜಾತೌ ಜಾತೌ ನವಚರ ನವವಾಣಿ ಮುಖೇ ಮುಖೇ ॥

ಎಂಬಂತೆ ಒಬ್ಬರ ಬುದ್ಧಿಯು ಮತ್ತೊಬ್ಬರ ಬುದ್ಧಿಯಂತೆ ಇರುವದಿಲ್ಲ. ಒಬ್ಬರು ಬರೆದದ್ದು ಮತ್ತೊಬ್ಬರು ಒಪ್ಪುವದಿಲ್ಲ. ಅದರಂತೆ "ಬೇಕಾದದ್ದು ಬೆಲ್ಲಕ್ಕಿಂತ ಸವಿ, ಬೇಡಾದದ್ದು ಬೇವಿನಕ್ಕಿಂತ ವಿಷ". ಶಿವಾನುಭವಿಗಳು ತಮಗೆ ಬೇಡಾದ ಮಾತನ್ನು ಖಂಡಿಸಿರಬಹುದು. ವೇ. ಕಲ್ಲಿನಾಥ ಶಾಸ್ತ್ರಿಗಳು ಬರೆದ ಶರಣ ಬಸವೇಶ್ವರ ಪುರಾಣವನ್ನೂ ವೇ. ಪಂ. ಬಳ್ಳಾರಿ ನಾಗೇಶ ಶಾಸ್ತ್ರಿಗಳು ಬರೆದ ಫಲಾಹಾರೇಶ್ವರ ಪುರಾಣವನ್ನೂ ವೇ. ಚನ್ನ ಕವಿಗಳು ಬರೆದ ಸೊಲ್ಲಾ ಪುರದ ಶರಣರ ಪುರಾಣವನ್ನೂ ಖಂಡಿಸಲಿಕ್ಕೆ ನಿಮ್ಮ ಬುದ್ಧಿಯನ್ನು ಚೂಪಾಗಿ ಮಸೆದು, ಗುರುಸ್ಥಲ ಮಠದಯ್ಯನವರ ಸನಾತನ ಧರ್ಮದ ಕರುಳನ್ನು ಕತ್ತರಿಸಿ, ಅವರ ಗೋಣು ಮುರಿದು, ಅವರ ಸ್ಥಾನದಲ್ಲಿ ನಿಮ್ಮ ಸಮತಾವಾದದ ಮಾದರ ಚನ್ನಯ್ಯ, ಹೊಲೆಯರ ಹರಳಯ್ಯ ಮುಂತಾದವರನ್ನು ತಂದಿರಿಸು ವದು ನಿಮ್ಮ ಮತವಾಗಿದೆ. ಭಕ್ತಾದಿಗಳ ದುರ್ಮಾರ್ಗ ಬಿಡಿಸಿ, ಸನ್ಮಾರ್ಗಕ್ಕೆ ತಂದು ಹಚ್ಚುವ ಪುರಾಣಗಳನ್ನು ಮನಸ್ಸಿಗೆ ಬಂದಂತೆ ತಿದ್ದುತ್ತೀರೆಂದಬಳಿಕ,

ವೇದಾಗಮಗಳನ್ನು ಶಿವಾನುಭವಿಗಳು ಖಂಡಿಸಿರುವರೇನು ನೋಡ್ದ ಮಾತಲ್ಲ. 'ಕೂಪಕೂರ್ಮ ನ್ಯಾಯ'ದಂತೆ ಶಿಷ್ಯ ಗುರುವಿಗೆ, ಹೆಂಡತಿ ಗಂಡನಿಗೆ, ನೌಕರರು ಧನಿಗೆ, ಗುರುಹಿರಿಯರಿಗೆ ಚಿಕ್ಕವರೂ ತಾಯಿ-ತಂದೆಗಳಿಗೆ ಮಕ್ಕಳೂ ಭಯಭಕ್ತಿಯಿಂದ ನಡೆಯುವದರ ಬದಲು, ಪ್ರಜರಿಗೆ ರಾಜರು, ಶಿಷ್ಯರಿಗೆ ಗುರುಗಳು, ಹೆಂಡತಿಗೆ ಗಂಡನು, ನವಕರರಿಗೆ ಧನಿಯು ಹೆದರುವ ಕಾಲಗತಿಯನ್ನು ನಿಮ್ಮಂಥ ದೀಡಪಂಡಿತರೇ ತಂದೊಡ್ಡಿದ್ದೀರಿ. ಕಾಲಯ ತಸ್ಮೈ ನಮಃ.

**ಪ್ರಶ್ನೆ:** ಲಿಂಗಾಂಗಿಗಳನ್ನೆಲ್ಲ ಪರಶಿವರೂಪರೆಂದು, ಸಂಗಮೇಶ್ವರನೆಂದು, ಶಿವಯೋಗಿಗಳೆಂದು ಜ್ಞಾನಿಗಳೆಲ್ಲ ಕೊಂಡಾಡಿರಲು, ಅವರಲ್ಲಿಯೇ ಒಂದು ಅಲ್ಪ ವರ್ಗವನ್ನೇ ಜಂಗಮರು, ಗಣಂಗಳು, ಅಯ್ಯನವರೆಂದು ಕರೆದು ಅವರ ತೃಪ್ತಿಯನ್ನು ಕುಮಾರ ಶಿವಯೋಗಿಗಳು ಜಗಾಗ್ಗೆ ಮಾಡುತ್ತಿದ್ದರೆಂದು ಬರೆದಿರುವಿರಿ.

**ಉತ್ತರ:** ತನ್ನ ಎಡೆಯಲ್ಲಿ ಕತ್ತೆ ಸತ್ತು ಬಿದ್ದಿರಲು ಎರಡನೆಯವರ ಎಡೆಯಲ್ಲಿ ನೊಣ ರುಾಡಿಸುವವನಂತೆ, ಬಸವೇಶ್ವರನು ಲಿಂಗ ಧರಿಸಿದವರೆಲ್ಲ ಸಂಗಮನಾಥನೆಂದು ಹೇಳಿದ ಮಾತಿಗೆ ಅದೇ ಪ್ರಭುದೇವರು ಹಾಗೂ ಚನ್ನಬಸವೇಶ್ವರರು ಒಪ್ಪಿಲ್ಲವೆಂಬುವದಕ್ಕೆ ಪ್ರಭುದೇವರು ಚನ್ನಬಸವೇಶ್ವರರನ ಮುಂದೆ ಹಾಡಿದ ವಚನವನ್ನು ನೋಡಿರಿ. ಮೈಸೂರಿನವರು ಬರೆದ "ಭಕ್ತಿ ಭಾಂಡಾರಿ" ಎಂಬ ವಚನ ಸಾಹಿತ್ಯದ (೨೫೫) ವಚನ:

ವಚನ: ಅಂಗದ ಮೇಲೆ ಲಿಂಗವುಳ್ಳವರೆಲ್ಲರು ಸಂಗಮನಾಥನೆಂಬ ಭಾವನೆ ಬಸವಣ್ಣನಿಗಾಯಿತಲ್ಲದೇ ಎನಗೆ ಆ ಭಾವವಿಲ್ಲ ನೋಡಾ! ಲಿಂಗೈಕ್ಯ ಶರಣರ ಕಂಡರೆ ನಂಬಿನಚ್ಚಿ ಅವರ ಪಾದಕ್ಕೆರಗುವರು ಎನ್ನ ಮನವು ||

ವಚನ: ಕುಲದಲ್ಲಿಯೂ ಅಧಿಕ, ಜ್ಞಾನದಲ್ಲಿಯೂ ಅಧಿಕನಾಗಲಾಗಿ ಆ ಕುಲಹೀನ ಜ್ಞಾನವಂತನಲ್ಲಿ ! ಸಮರಸ ಸಲ್ಲದು ನೋಡಾ ಗುರುವೇ ಶಿವಶಕ್ತಿಯೇ ಸತ್ಕುಲ, ಶಿವಜ್ಞಾನವೇ ಸತ್ಕುಲ, ಶಿವಪೂಜೆಯೇ ಸತ್ಕುಲ ನೋಡಾ ಗುರುವೇ ಕಥಾವರ್ಣವೇ ಸತ್ಕುಲ, ಶಿವಗೋಷ್ಠಿಯೇ ಸತ್ಕುಲ ನೋಡಾ ಗುರುವೇ ಕಪಿಲಸಿದ್ಧ ಮಲ್ಲಿಕಾರ್ಜುನ ಗುರುವೇ ||

ಎಂಬಂತೆ ಲಿಂಗಾಂಗಿಗಳ ಕುಲವೆಲ್ಲ ಸರಿಸಮಾನವಲ್ಲ. ಅಧೀನರೂ ಅಧಿಕೃತರೆಂಬ ಹೆಚ್ಚುಕಡಿಮೆ ಕುಲವಿದ್ದು, ಬಸವೇಶ್ವರನು ಒಂದು ಲಕ್ಷ ತೊಂಭ

ತ್ತಾರು ಸಾವಿರ ಜಂಗಮರನ್ನು ಉಣಿಸಬೇಕೆಂಬ ಸಂಕಲ್ಪವಿರಲು ಅದರಲ್ಲಿ ಆರು ಸಾವಿರ ಜಂಗಮರ ಕೊರತೆ ಆಗಲು ಮಾಂಡವ್ಯ ಪಟ್ಟಣದಿಂದ ಬಸವೇಶ್ವರನು ಕೋರಿಸೆಟ್ಟಿಯ ವೇಷ ಧರಿಸಿ, ಆರು ಸಾವಿರ ಜಂಗಮರನ್ನು ಕದ್ದು ತಂದನೆಂದು ಚೋರ ಬಸವೇಶ್ವರ ಪುರಾಣವೇ ಹೇಳುತ್ತದೆ.

ವಚನ: ಶ್ರೀ ಗುರುಲಿಂಗ ಸಂಗಮಕ್ಕೆ ಅರ್ಥಪ್ರಾಣಾಭಿಮಾನವ ಕೊಟ್ಟು ಅಹಂಕಾರ ಏಳದಿಹಂತಾ ಪುರಾತನರ ಮನೆಯಲ್ಲಿ ಎತ್ತಾಗಿ ಹುಟ್ಟಿಸಯ್ಯಾ, ತೊತ್ತಾಗಿ ಹುಟ್ಟಿಸಯ್ಯಾ, ಬಾಗಿಲಕಾಯ್ವಪ್ಪಂತೆ ಸೊಣಗನಾಗಿ ಹುಟ್ಟಿಸಯ್ಯಾ ಜಂಗಮಲಿಂಗವೇ ಶಿವನೆಂದು ನಂಬಿ ನಮಸ್ಕರಿಸುವ ಪುರಾತನರ ಮನೆಯ ಜೇಲಿಯಾಗಿ ಹುಟ್ಟಿಸಯ್ಯಾ ರಾಮನಾಥ ॥

ವಚನ: ಆವಾವ ಪರಿಯಲ್ಲಿ ಆವಾವ ಭಾವದಲ್ಲಿ ಗುರುಲಿಂಗಜಂಗಮಕ್ಕೆ ದಾಸೋಹ ಮಾಡುವೆ ಕೊಡುವೆನೆಂಬ ಸದ್ಭಕ್ತಬಾಗಿಲತೋರಿ ಬದುಕಿಸಯ್ಯಾ । ಇವನ್ನೆಲ್ಲವ ನೊಪ್ಪಿಸಿ ಜಂಗಮ ಲಿಂಗವನ್ನೆ ಪ್ರಾಣೇಶ್ವರನೆಂಬ ಪುರಾತನರ ಪಾದರಕ್ಷೆಯ ಹತ್ತಿರ ಇರಿಸೆನ್ನನು ಕೂಡಲಸಂಗಮದೇವಾ ॥

ಈ ಪ್ರಕಾರ ಗುರುಲಿಂಗಜಂಗಮಕ್ಕೆ ತನುಮನಧನ ಕೊಟ್ಟು ಸೇವೆಗೈದರಲ್ಲದೆ ಭಕ್ತರಿಗೆ ಹೇಳಿಲ್ಲ. ಯಾಕೆ, ಬಸವೇಶ್ವರನ ಹತ್ತಿರ ನಿಮ್ಮಂಥ ಭಕ್ತಾದಿಗಳಿದ್ದಿಲ್ಲವೇ? ಅವರೆಲ್ಲರನ್ನು ಬಿಟ್ಟು ತೃಪ್ತಿಗೊಳಿಸಲಿಕ್ಕೆ ಜಂಗಮರನ್ನೇ ಯಾಕೆ ಕದ್ದು ತಂದಿರಬಹುದು? ಭಕ್ತರ ತೃಪ್ತಿ ಹಾಗು ದಾನಾದಿಗಳನ್ನು ಸ್ವೀಕರಿಸುವದು ಶಾಸ್ತ್ರಸಮ್ಮತವಲ್ಲವೆಂದು ಬಿಟ್ಟಿರಬಹುದಲ್ಲವೇ?

**ಪ್ರಶ್ನೆ:** ಶಿವಭಕ್ತಂ ಗಿರಿಕಾಶಿ, ಹಂಪೆ ಮೊದಲಾದ ಕ್ಷೇತ್ರತೀರ್ಥಂಗಳಂ ಪೆಸರ್ಗೊಳ್ಳೆ ನಾಲಿಸ ನತೀವ ಕಾಂಕ್ಷೆಯಿಂ ಪೋಗನು ಎಂದು ಮಾಯಿದೇವ ಶಿವಯೋಗಿಯು ಶತಕತ್ರಯದಲ್ಲಿ ಸಾಮಾನ್ಯ ಲಿಂಗಾಂಗಿಗಳು ಶ್ರೀಶೈಲ ಮುಂತಾದ ಸ್ಥಾನದಲ್ಲಿರುವ ಸ್ಥಾವರ ಲಿಂಗಗಳ ಹೆಸರನ್ನು ಕೂಡ ನೆನೆಯಬಾರದೆಂದು ಹೇಳಿರುವರು. ಹೀಗಿರುವಲ್ಲಿ ಅಂತಹ ಸ್ಥಾವರ ಲಿಂಗೋದ್ಭವ ಜಂಗಮನಿಂದ ಫಲಾಹಾರೇಶ್ವರನಿಗೆ ಜಂಗಮದೀಕ್ಷೆಯಾಯಿತಷ್ಟೇ? ಅಲ್ಲಿ ಜಂಗಮನು ಸ್ಥಾವರಪಲ್ಲಡಗಲು ಶೈವನಾದ ಮಾರ್ಕಂಡೇಯನಂತೆ ಆ ಲಿಂಗಕ್ಕೆ ತೆಕ್ಕೆಬಿದ್ದು

ಶೋಕಿಸುವದು ಆದರ್ಶಮೂರ್ತಿಯಾದ ಜಂಗಮನಿಗೆ ಹೇಗೆ ಗೌರವಾಸ್ಪದವ್ರೋ ತಿಳಿಯದು.

**ಉತ್ತರ:**

ಪದ್ಯ: ಸ್ಥಾವರ ಜಂಗಮ ದ್ವಿವಿಧಲಿಂಗ ಸಮಾಹಿತ ಭಕ್ತಿತಾನೆ ಸಂ। ಭಾವಿಸಿ
ಜನ್ಮವೊಂದರೊಳೆ ಸಿದ್ಧಿಪ ಕೇವಲ ನಿತ್ಯ ಮುಕ್ತಿಯೆಂ । ದೋವಿಸಮಸ್ತ
ಶೈವಮಿಳಾಗಮ ಧರ್ಮರಹಸ್ಯ ವಾಕ್ಯದಿಂ। ಪಾವನ ಮೂರ್ತಿ ಸದ್ಗುರು
ಕೃಪಾನಿಧಿ ಬೋಧಿಸಿದಂ ಶಿವಾಧವಾ ॥

ಟೀಕಾ॥ ಪಾವನಮೂರ್ತಿ – ಪವಿತ್ರ ರೂಪನಾದ ಕೃಪಾನಿಧಿ – ದಯಾ ನಿಧಿಯಾದ ಸದ್ಗುರು – ಶ್ರೀಗುರುವು – ಸ್ಥಾವರ ಜಂಗಮ ದ್ವಿವಿಧಲಿಂಗ ಸಮಾಹಿತ ಭಕ್ತಿ – ಸ್ಥಾವರ ಜಂಗಮ – ಇಷ್ಟಲಿಂಗ ಜಂಗಮಲಿಂಗವೆಂಬ ದ್ವಿವಿಧ ಲಿಂಗ ಸಮಾಹಿತ – ಸಮಂಧಿಸಲ್ಪಟ್ಟ ಭಕ್ತಿಯು ಎಂದು ಹೇಳಿ ಸ್ಥಾವರಲಿಂಗ, ಜಂಗಮಲಿಂಗ ಒಂದೇ ಎಂದು ಹೇಳಿದ್ದರಿಂದ ಶರಣರು ಕೆಲವರು ಸ್ಥಾವರ ಲಿಂಗವೇ ಜಂಗಮವೆಂದು ತಿಳಿದು ಭಕ್ತಿಯಿಂದ ಪೂಜಿಸಲ್ಪಟ್ಟಿವೆ ಎಂದು ಅವರ ಚರಿತ್ರ ಹೇಳುತ್ತದೆ.

ವಚನ: ಲೋಕದೊಳನರವರ ಮನಕೊಲುದುದೇ ಬ್ರಹ್ಮ। ವ್ರತನಿಷ್ಠರಿಗೆ
ಸತ್ಯಮಾರ್ಗಚರಣೆಯೇ ಬ್ರಹ್ಮ। ಭಕ್ತಿಯುತರಿಗೆ ತಮಗಿಷ್ಟವಾದ
ದೈವವೇ ಬ್ರಹ್ಮ। ಜಾರಚೋರರಿಗೆ ಪರಪದಾರ್ಥವೇ ಬ್ರಹ್ಮ।
ನಿಮ್ಮಂಥ ಕುಲನಾಶಕರಿಗೆ ಅನ್ಯರ ದೂಷಿಸುವದೇ ಬ್ರಹ್ಮ॥

ಎಂಬಂತೆ ಬಸವೇಶ್ವರನು ಸ್ಥಾವರ ಲಿಂಗವಾದ ಕಪ್ಪಡಿ ಸಂಗಮೇಶ್ವರ ನನ್ನೇ ತನ್ನಿಷ್ಟ ದೈವವನ್ನಾಗಿ ಪೂಜಿಸಿದನೆಂದು ಪ್ರಭುದೇವರು ಬಳ್ಳಿಗಾವಿಯ ಗೊಗ್ಗೇಶ್ವರನೆಂಬ ಸ್ಥಾವರಲಿಂಗವನ್ನು ಇಷ್ಟದೈವವನ್ನಾಗಿ ಮಾಡಿಕೊಂಡವ ನಾಗಿಯೂ ಸೊಲ್ಲಾಪುರದ ಸಿದ್ಧರಾಮೇಶ್ವರನು ಮಲ್ಲಿಕಾರ್ಜುನ ಸ್ಥಾವರಲಿಂಗ ವನ್ನು ಪೂಜಿಸಿದನೆಂದೂ ಅಕ್ಕಮಹಾದೇವಿಯು ಸ್ಥಾವರ ಲಿಂಗವಾದ ಶ್ರೀಶೈಲ ಮಲ್ಲಿಕಾರ್ಜುನನನ್ನೇ ಪತಿಯನ್ನಾಗಿ ಪೂಜಿಸಿದಳೆಂದೂ ಇನ್ನೂ ಕೆಲವು ಶಿವ ಶರಣರು ಸ್ಥಾವರ ಲಿಂಗಗಳ ಉಪಾಸಕರಿದ್ದಂತೆ ಅವರ ಚರಿತ್ರದಿಂದ ತಿಳಿದು ಬರುತ್ತದೆ. ಘಲಾಹಾರೇಶ್ವರನು ಬಸವಾದಿ ಪ್ರಮಥರಂತೆ ಆಚರಿಸಿರುವದು

ಯಾವ ತಪ್ಪೆಂದು ಬರೆದಿರುವರೋ ? ದೇವರೇ ಬಲ್ಲ. ಅದೇ ಮಗ್ಗಿ ಮಾಯಿದೇವರು ತನ್ನಿಷ್ಟದೈವವಾದ ಐಪುರಿ ಸೋಮನಾಥನನ್ನು ಭಜಿಸಿರುವದಲ್ಲದೆ, 'ಶಿವಾವಲ್ಲಭ ಶತಕ'ದ ಅಂತ್ಯದಲ್ಲಿ ಒಂದು ಪದ್ಯವನ್ನೂ ಸಹ ಈ ಪ್ರಕಾರ ಅಂದಿರುವರು ನೋಡಿರಿ.

ಪದ್ಯ: ಓಮಿತ್ಯಕ್ಷರ ಮಾತುಕಾತ್ರಯದ ತದ್ವಾಕ್ಯಸ್ಥ ಮಾತ್ರಾತ್ರಯಂ । ನಾಮಂ
ಶ್ರೀಮದ ಮದುಮಾಯಿನಲ್ಪಿರತರಂ ದೀರ್ಘಂ ಮಕಾರಂ ದ್ವಿತೀ ।
ಯಾಮಾ ಸಮಭವಾ ಉಕಾರ ಮುಭಯಂ ಗೂಡಿರ್ದುವಾಸಾರ್ಥಕಂ ।
ಸೋಮಂ ಮತ್ಪ್ರಭು ವೈಪುರೀಶ ನೆನಲಾಂ ಧನ್ಯಂ ಶಿವಾವಲ್ಲಭಂ ॥

ಹೀಗೆ ಮಾಯಿದೇವರು ತನ್ನಿಷ್ಟ ದೈವವನ್ನು ಪೂಜಿಸಿ ಯಾಕೆ ಸ್ತೋತ್ರ ಮಾಡಿದರೆಂಬ ಎಚ್ಚರಿಲ್ಲದೆ ಹಿಂದುಮುಂದು ವಿಚಾರಿಸದೆ ಉಪಮಾ ತೋರಿಸುವ ಅ. ಮ. ಪಾಟೀಲರೇ, ಭಕ್ತರಾದ ನೀವು ಜಂಗಮರಾಗಬೇಕೆಂಬ ಭ್ರಾಂತಿಯ ಭ್ರಮೆಯೊಳು ಬಿದ್ದು, ಬಳ್ಳಾರಿ ನಾಗೇಶಶಾಸ್ತ್ರಿಗಳನ್ನು ಕೆದವಲಿಕ್ಕೆ ಹೋಗಿ ನೀವೇ ಮುಗ್ಗರಿಸಿ ಬಿದ್ದಿದ್ದೀರಿ. ಪ್ರತಿಯೊಂದು ಉದಾಹರಣೆ ಕೊಟ್ಟು ಬರೆದಿರುವ ನಿಮ್ಮ ಮಂತ್ರವಾದಿ ಎಂಬ ಗ್ರಂಥವು ವೀರಶೈವ ಮತದ ಹೆಚ್ಚುಗಾರಿಕೆಗಾಗಿಯೂ ಉತ್ತೇಜನ ಕೊಡುವ ಶಿವದೀಕ್ಷಾ ಪ್ರಭಾವಕ್ಕಾಗಿಯೂ ಲಿಂಗಧಾರಣ ಶ್ರೇಷ್ಠತೆಗಾಗಿಯೂ ಭಸ್ಮರುದ್ರಾಕ್ಷಿಗಳ ಪಾವಿತ್ರ್ಯತೆಯ ಧಾರಣೆಗಾಗಿಯೂ ಮಂತ್ರಮಹತ್ವಕ್ಕಾಗಿಯೂ ಪ್ರಶಂಸಾಪರವಾಗಿದ್ದ ವಾಕ್ಯಗಳನ್ನು ಮುಂದುಮಾಡಿ ಗ್ರಂಥಗಳನ್ನು ಬರೆದರೆ ಸುಜ್ಞರಿಗೆ ಇದು ಶೋಭಿಸಲಾರದು.

ಶ್ಲೋಕ: ಯಮುಪಂಚ ಮುಖೋದ್ಭೂತಾಸ್ಯಂ ಸ್ಥಾಪ್ಯ ಕಲಶಾನ್ ಭುವಿ । ದೀಕ್ಷಾಂ ಕೃತ್ವಾ
ಮಹಾದೇವಿ ಪಂಚ ವಾನಾಂ ನಗಾತ್ಮಜೆ । ಕಲೌ ತದ್ವಂಶ ಜಾತಾನಾಂ ದೀಕ್ಷಾ
ನುಗ್ರಹ ಕಾರಣಾತ್ । ಸ್ಥಾಪ್ಯ ನಿಜಶಿಷ್ಯಾಂಶ್ಚ ಪುನಸ್ತೇಮಾಂ ಸಮಾಗತಃ ॥

ಪಂಚಾಚಾರ್ಯರು ಭೂಲೋಕದಲ್ಲಿ ಯಥಾವಿಧಿಯಾಗಿ ಸದ್ಯೋಜಾತಾದಿ ಕಲಶಗಳನ್ನಿಟ್ಟು ತಮ್ಮ ಶಿಷ್ಯರಿಗೆ ದೀಕ್ಷಾ ಸಂಸ್ಕಾರವನ್ನು ಮಾಡಿ ತಮ್ಮ ವಂಶಜರಿಗೆ ದೀಕ್ಷೆಯನ್ನು ಮಾಡುವವಕ್ಕಾಗಿ ಅವರನ್ನು ಭೂಲೋಕದಲ್ಲಿಯೇ ಬಿಟ್ಟು ತಾವುಗಳು ವೀರಶೈವ ಮತಸ್ಥಾಪನೆಯನ್ನು ಮಾಡಿ ಅನಂತರ ನನ್ನನ್ನೇ ಹೊಂದುವಿರೆಂದು ಪಾರ್ವತಿಯನ್ನು ಕುರಿತು ಪರಶಿವನು ಹೇಳಿದನೆಂದು ಬರೆದಿ

ದ್ದಾರೆ. ಅವರೇ ಈಗಲೂ ಮಠಸ್ಥಾನವಲ್ಲಿದ್ದುಕೊಂಡು ಭಕ್ತಾದಿಗಳ ಯೋಗ ಕ್ಷೇಮವನ್ನು ನೋಡಿಕೊಂಡು ಬಿನ್ನಹ ತೀರಿಸಿ ಆಶೀರ್ವಾದ ಮಾಡುತ್ತಾರೆ.

**ಪ್ರಶ್ನೆ:** ಗೃಹಂ ಕ್ಷೇತ್ರಂ ಚ ಬೀಜಂ ಚ ಧಾನ್ಯಾನಿ ಚ ಧನಾನಿಗಾಃ ಏತಲ್ಲಿಂಗಾಂಕಿತಂ ಶುದ್ಧ ಮನ್ಯಥಾ ನರಕಂ ವ್ರಜೇತ್ ॥ "ವಾತುಲಾಗಮ ಮನೆ, ಹೊಲ, ಬೀಜ, ಧನಧಾನ್ಯ, ಆಕಳು ಮೊದಲಾದವುಗಳಿಗೆ ಲಿಂಗಮುದ್ರೆ ಯಿದ್ದರೆ ಮಾತ್ರ ಶುದ್ಧ; ಇಲ್ಲವಾದರೆ ಅಶುದ್ಧ. ಇಂಥ ಅಶುದ್ಧ ಪದಾರ್ಥಗಳ ಉಪಭೋಗದಿಂದ ಮಾಹೇಶ್ವರನು ನರಕಕ್ಕೆ ಹೋಗುವನು ಎಂದೆನ್ನುವರು. ಎಂದು ಬರೆದಿರುವಿರಿ.

**ಉತ್ತರ:** ವೀರಶೈವಾಮೃತ ಪುರಾಣ ೭ನೇ ಕಾಂಡ ೧೫ನೇ ಸಂಧಿಯಲ್ಲಿ ಲಿಂಗಮುದ್ರಾಂಕಿತವು ೧೫ನೇ ಶೀಲವೆಂದು ಹೇಳಿ ಕೌರವ ಪಾಂಡವರ ಯುದ್ಧದಲ್ಲಿ ಭೀಷ್ಮನು ಸಾಯಲು, ಅರ್ಜುನನು ಅವನನ್ನು ಬೆನ್ನಿನಲ್ಲಿ ಕಟ್ಟಿ ಕೊಂಡು ಸ್ಮಶಾನವಿಲ್ಲದ ಸ್ಥಲದಲ್ಲಿ ಸುಡುವೆನೆಂದು ತಿರುಗಾಡುವಲ್ಲಿ, ಆಕಾಶ ವಾಣಿಯು— ಭೂಮಿಯಲ್ಲವು ಸ್ಮಶಾನವು ಇರುವ ಸ್ಥಲಕೆ ಲಿಂಗಮುದ್ರೆಯಂ ಮಾಡಿಕೊಂಡರೆ ಅದೇ ಸ್ಥಲ ಶುದ್ಧಿಯುಂಡರಿದು ಹೀಗೆ ಸರ್ವಕ್ಕೂ ಲಿಂಗ ಮುದ್ರೆ ಹಾಕುವದು. ಲೌಕಿಕರಿಗೆ ಅಸಾಧ್ಯವೆಂದು ಗುರುಜಂಗಮ ಮಠಗಳಿ ಗಷ್ಟೇ ಲಿಂಗಮುದ್ರೆ ಹಾಕುವ ರೂಢಿಯಿದೆ. ಶಾಸ್ತ್ರದ ಬದನೇಕಾಯಿ ತಿನ್ನಲಿಕ್ಕೆ ಬರುವದಿಲ್ಲ. ಕಾಲಿಗೆ ಮುಳ್ಳು ನಡುವವೆಂದು ಚರ್ಮವನ್ನು ಭೂಮಿ ತುಂಬ ಹಾಸದೆ ಕಾಲಿಗಷ್ಟೇ ಹಾಕಿಕೊಂಡು ನಡೆವಂತೆ ಸರ್ವಕ್ಕೂ ಲಿಂಗಮುದ್ರೆ ಹಾಕ ದಿದ್ದರೆ ಮಹೇಶ್ವರರಿಗೆ ನರಕವಾದರೆ ನಿಮಗೆ ಯಾವ ನರಕವಾಗುವದೆಂಬುವ ದನ್ನು ವಾಚಕರೇ ವಿಚಾರಿಸಲಿ.

**ಶ್ಲೋಕ:** ನಾಮಾರ್ಥಂ ಪಾಚಯೇದನ್ನಂ ನಾಧಾನ್ನಾತಿಥ್ಯವರ್ಜಿತಂ ನಾದ್ಯಾದ ಲಿಂಗಿ ನಶ್ಚಾನಂ ದೃಷ್ಟಂ ಚಾನ್ನ ಮಲಿಂಗಿನಾಂ ॥

ವೀರಶೈವನು ತನ್ನ ಸಲುವಾಗಿ ಪಾಕವನ್ನು ಮಾಡಬಾರದು. ಜಂಗ ಮಾರ್ಪಿತವಾಗದ ಅನ್ನವನ್ನು ಸೇವಿಸಬಾರದು. ಹಾಗು ಅಲಿಂಗಿಗಳು ಮುಟ್ಟಿದ, ನೋಡಿದ ಅನ್ನವನ್ನು ಉಣ್ಣಬಾರದು. ಈ ಪ್ರಕಾರವಾಗಿ ಶಿವಾಗಮ ಹೇಳು ತ್ತಿದ್ದು, ಗುರುಜಂಗಮರನ್ನು ಹೀಯಾಳಿಸಿ ಜಂಗಮರಿಲ್ಲದೆ ಉಣ್ಣುವ ನಿಮಗೆ ಯಾವ ನರಕವಾಗುವದೆಂಬುದನ್ನು ವಾಚಕರೇ ವಿಚಾರಿಸಲಿ.

ಡಿ. ಮ. ಪಾಟೀಲರೇ ಇದು ಶಿವಭಕ್ತಿ ಪ್ರಧಾನ್ಯವನ್ನು ವ್ಯಕ್ತಪಡಿಸುವವಕ್ಕಾಗಿ "ಸರ್ವ ಲಿಂಗಾಂಕಿತಂ ಶ್ರೇಷ್ಠ ಮನ್ಯಚ್ಚಂಡಾಲವದ್ಭವೇತ್" ಎಂದು ಶಂಕರ ಸಂಹಿತೆಯಲ್ಲಿ ವೀರಮಾಹೇಶ್ವರ ಪ್ರಶಂಸೆಯೆಂಬ ಪ್ರಕರಣದಲ್ಲಿ ಹೇಳಿರುವದರಿಂದ ವೀರಶೈವನಾದವನು ತಾನು ಲಿಂಗಧಾರಣವುಳ್ಳವನಾಗಿರಬೇಕು. ಪತ್ನಿ, ಪುತ್ರ, ಭೃತ್ಯ ಮುಂತಾದವರನ್ನು ಲಿಂಗಧಾರಣವುಳ್ಳವರನ್ನಾಗಿ ಮಾಡಬೇಕು. ವಾಸಿಸುವ ಮನೆಗೂ ಗೋವು ಮುಂತಾದವುಗಳಿಗೂ ಲಿಂಗಮುದ್ರೆಯನ್ನು ಹಾಕಬೇಕೆಂದು ಲಿಂಗಮುದ್ರೆಯ ಮಹಿಮೆಯನ್ನು ತಿಳಿಯದೆ ಇವರಲ್ಲಿ ಪರಾಂಙ್ಮುಖನಾದ ಸಂಸಾರಿ ಗುರುಸ್ಥಲ, ಜಂಗಮಸ್ಥಲ ಮಠಗಳಿಗೆ ಲಿಂಗ ಮುದ್ರೆಯನ್ನು ಹಿಂದಿನವರು ಹಾಕಿಸುತ್ತ ಬಂದಿದ್ದಾರೆ. ಶಾಸ್ತ್ರವು ಬಹು ಬಗೆಯಿಂದ ಸೌಲಭ್ಯವನ್ನು ತೋರಿಸಿ ಒಡಂಬಡಿಸುವದು. ಅರ್ಥವಾದದೊಳಗಿನ ಕೆಲವು ಶ್ಲೋಕಗಳನ್ನು ಬರಕೊಂಡು ಎಲ್ಲರೂ ಗುರುಜಂಗಮರಾಗಲಿಕ್ಕೆ ಬರುವದೆಂದು ಹೇಳುವ ನಿಮ್ಮ ದುರ್ಬೋಧೆಯನ್ನು ಕೇಳುವರಾರು. ಕೆಲವು ಹಟಮಾರಿ ನಿನ್ನಂಥ ಭಕ್ತರು ಮತ್ತು ನಿನ್ನ ಅನುಯಾಯಿಗಳಿಗೂ ಮಾತ್ರ ಬಿಡುಗಡೆಯಿಲ್ಲ. ಹಿಂದೆ ಶಾಸ್ತ್ರಿಗಳ ಸಮೂಹವು ಎಷ್ಟು ಬಗೆಯಿಂದಲೂ ನಿನ್ನ ಮಾತು ಖಂಡಿಸಿ ಪುಸ್ತಕಗಳನ್ನು ಬರೆದರೂ ನೀನು ಕೇಳುವದಿಲ್ಲ. ಇಷ್ಟೇ ಅಲ್ಲ, ವಾದದಲ್ಲಿ ವೇ|| ಪಂ|| ಕಲ್ಲಿನಾಥ ಶಾಸ್ತ್ರಿಗಳು ಸೋಲಿಸಿದರೂ ಕೂಡ ನಾವೇ ಗೆದ್ದವೆಂದು ಬಡಬಡಿಸಿ ಮೆರೆದಾಡುವ ನೀನು "ಲಜ್ಜಾ ಮೇಕಂ ಪರಿತ್ಯಜ್ಯ ಸರ್ವತ್ರ ವಿಜಯೀ ಭವ" ಎಂಬ ವಾಕ್ಯದಂತೆ ನಿನಗೆ ಸರ್ವದಾ ಜಯವೇ ಇರುತ್ತದೆ. ನಾಚಿಕೆಯಿಲ್ಲದವರಿಗೆ ಸೋಲು ಎಲ್ಲಿ, ಪೂರ್ವದ ಒಬ್ಬ ಕನ್ನಡ ಕವಿಯು ವರ್ಣಿಸಿದ್ದೇನಂದರೆ—

ಕಂದ: ಮೂಗಳಿದೆ ಶಿವಂತಂ ತಾ | ನಾಗಿಯೆ ಕರೆಕರೆದು ಜನರ ನೆಲೆ ನೋಗ
ರಿರ್ದ್ಯಾ || ಈಗಳ್ಕೊಯ್ದೇರಿಸಿದೇಂ | ಮೂಗಂ ತುಳಜಾ ಭವಾನಿ ಯಡಿ
ಗಳಿಗೆಂದಂ |

ಎಂಬಂತೆ ವಾದದಲ್ಲಿ ಸೋತು ಮೂಗನ್ನು ಕೊಯ್ಸಿಕೊಂಡ ಖಶವಂತನೆಂಬೊಬ್ಬ ಮಾನಗೇಡಿಯು ತನಗೆ ಮೂಗಿಲ್ಲದ ಮಹಿಳೆಂಬುವರೆಂಬ ಅಭಿಮಾನದಿಂದ ತಾನೇ ಜನರನ್ನು ಕರೆಕರೆದು ನನ್ನ ಹಾಗೆ ತುಳಜಾಭವಾನಿಯ

ಪಾಪಕ್ಕೆ ಮೂಗನ್ನು ಕೊಯ್ದೇರಿಸಿದವರಾರೆಂದು ತೋರಿಸುತ್ತಿದ್ದನೆಂಬ ಕಥೆಯಂತೆ ಮೆರೆದಾಡುವ ವಿತಂಡವಾದಿಗಳಿಗೆ ಯಾರೂ ಈಡಿಲ್ಲ.

ವಿಶೇಷ ವೀರಶೈವನಿಗೆ ನಾಲ್ಕು ಹೆಸರುಗಳು ಅವೆ. ಗುರು ಎಂಬ ನಾಮವು ಯಾಕೆ ಬಂತು ?

**ಶ್ಲೋಕ:** ಗುಣಾತೀತಂ ಗುಕಾರಂಚ ರೂಪಾತೀತಂ ರುಕಾರಕಃ ।
ಗುಣಾತೀತಂ ರೂಪಂಚಯೋ ಸದ್ಯಾತ್ಸ ಗುರು ಸ್ಮೃತಃ ॥

ಅಂದರೆ ಗುಣಾತೀತನಾದಂಥ ರೂಪಾತೀತನಾದಂಥ ವಸ್ತು ಯಾವದೋ ಅದು ಗುರುವು. ಆಚಾರ್ಯನೆಂದರೆ:

**ಶ್ಲೋಕ:** ಅಂಚಿನೋತಿ ಚ ಶಾಸ್ತ್ರಾರ್ಥಾನ್ ಆಚಾರ್ಯೇ ಸ್ಥಾಪಯತ್ಯಲಂ ।
ಸ್ವಯ ಮಾ ಚರತೇಯಸ್ಮಾತ ಆಚಾರ್ಯಸ್ತೇ ನಚೋಚ್ಯತೇ ॥

ಸಕಲ ಶಾಸ್ತ್ರದ ರಹಸ್ಯ ತಿಳಿದಿರಬೇಕು, ಭಕ್ತಾದಿಗಳಿಗೆ ಅವರಂತೆ ಬೋಧಿಸಬೇಕು, ತಾನೂ ಕೂಡ ಅದರಂತೆ ಆಚರಣೆಯಲ್ಲಿರಬೇಕು; ಅಂದರೆ ಆಚಾರ್ಯನೆನ್ನುವರು. ಆರಾಧ್ಯನೆಂದರೆ: "ಆರಾಧಯತುಂ ಯೋಗ್ಯಃ ಆರಾಧ್ಯಃ" ಪೂಜಾ ಮಾಡಿಸಿಕೊಳ್ಳಲಿಕ್ಕೆ ಯಾವಾತನು ಯೋಗ್ಯನೋ ಅವನು ಆರಾಧ್ಯನು. ದೇಶಿಕನೆಂದರೆ: "ಜ್ಞಾನಾನ್ ಮೋಕ್ಷಂದಿಶತಿಯಃ ಸಃದೇಶಿಕಃ" ಜ್ಞಾನೋಪದೇಶದಿಂದ ಮೋಕ್ಷಮಾರ್ಗವನ್ನು ತೋರಿಸುವವನೇ ದೇಶಿಕನು.

ಗದಗಿನ

'ಶರಣರ ಮಾರ್ಗ'

ಎಂಬ ತ್ರೈಮಾಸಿಕದ

# ಖಂಡನ ಲೇಖನಗಳು

## "ಶರಣರ ಮಾರ್ಗ"ವೆಂಬ ತ್ರೈಮಾಸಿಕ ಮೊದಲನೆ ಸಂಚಿಕೆಯು ನಿಂದೆ — ಖಂಡನೆಗಳು

ಶಿವಾನಂದ ಲಿಂಗರಾಜ ಬಾಗೂರ ಇವರ ಶರಣರ ಮಾರ್ಗವೆಂಬ ಮೊದಲನೇ ಸಂಚಿಕೆಯಲ್ಲಿ ಮಂತ್ರವಾದಿಗೆ ಮದ್ದೆಂಬ ಗ್ರಂಥವನ್ನು ಬರೆದಿರುವರೆಂಬ ಸುದ್ದಿಯನ್ನು ಹಾವೇರಿಯ ಶರಣತತ್ವ ಪ್ರೇಮಿಗಳಿಂದ ತಿಳಿದಿದೆ ಎಂದು ಅದರಲ್ಲಿ ಅಪಶಬ್ದ, ಅಶುದ್ಧ ಬರಹ ಬೇಕಾದಷ್ಟು ಅವೆಯೆಂದು ಬರೆದಿರುವ ಇವರ ಮಂತ್ರವಾದಿಯಲ್ಲಿಯ ಅಪಶಬ್ದಕ್ಕೆ ಅಪಶಬ್ದ, ಅಶುದ್ಧ ಬರಹಕ್ಕೆ ಅಶುದ್ಧ ಶಬ್ದವನ್ನು ಉಪಯೋಗಿಸಿವೆ. ತನ್ನ ಎಡೆಯಲ್ಲಿ ಕತ್ತೆ ಸತ್ತು ಬಿದ್ದಿರಲು, ಎರಡನೆಯವರ ಎಡೆಯಲ್ಲಿಯ ನೊಣ ಜಾಡಿಸುವಂತೆ ಮೊದಲು ನಿಂದೆ ಸಾಹಿತ್ಯವೆಂಬ "ಮಂತ್ರವಾದಿ" ಪುಸ್ತಕ ಬರೆದ ಮೊದಲನೆಯ ದೊಡ್ಡ ಪಿಶಾಚಿ ನೀನಲ್ಲವೇ! ಸನಾತನ ಗುರುಸ್ಥಲ ಮಠ ಜಂಗಮರನ್ನು ಹೊಲೆಯರ ಹರಳಯ್ಯ, ಮಾದರ ಚನ್ನಯ್ಯನ ವಂಶಿಕರೆಂದೂ ಕೃತ್ರಿಮ ಕುಲದವರೆಂದೂ ವಿವೇಕ ಶೂನ್ಯ ಮುಂತಾದ ನಿಂದಾಸ್ಪದ ವಾಕ್ಯಗಳಿಂದ ಮೊದಲು ಬರೆದ ಹೊಲಸು ಕೈ ಹಾಗು ನಿಂದಿಸಿದ ಹೊಲಸು ಬಾಯಿ ನಿಂದಲ್ಲವೇ !! ಈ ಪಿಶಾಚಿಯು "ಮಂತ್ರವಾದಿಗೆ ಮದ್ದು" ಎಂಬ ಹೆಸರನ್ನು ಕೇಳಿದಾಗಲೇ ಎದೆಯೊಡೆದು ನೀರಾಗಿ, ಹುಚ್ಚೆದ್ದು, ಲಜ್ಜೆ ತೊರೆದು, ಈ ಕರ್ನಾಟಕ ರಂಗಭೂಮಿಯ ಮೇಲೆ ಶರಣರ ಸಂಘವೆಂಬ ಮೇಲ್ಮುಸುಗನ್ನೆಳೆದು ಥೈಥೈ ಎಂದು ಕುಣಿಯುತ್ತೊಡಗಿ, ಶರಣರ ಸೇವಾಸಂಘವೆಂಬ ಪವಿತ್ರ ನಾಮದ ದುರುಗವ್ವನ ಗುಡಿಯನ್ನು ರಚಿಸಿಕೊಂಡು, ಅದರಲ್ಲಿ ವೀರಶೈವ ಎಂಬ ದೇವರನ್ನು ಸ್ಥಾಪಿಸಿ, ಶರಣರ ಮಾರ್ಗವೆಂಬ ತ್ರೈಮಾಸಿಕದ ಡೋಲನ್ನು ಬಿಗಿದುಕೊಂಡು, ಸಮತಾವಾದವೆಂಬ ಮುರಗಿ ಲಡ್ಡನ್ನು ತೆಗೆದುಕೊಂಡು ಗುಡಿಯನ್ನು ಹೊತ್ತು ಸಂಚಾರ ಮಾಡುತ್ತ ಗದಗಿನ ಶ್ರೀ ಶಿವಾನಂದ ಸ್ವಾಮಿಗಳ ಮಠದ ಮುಂಭಾಗದಲ್ಲಿ ಕುಳಿತು ಈ ಪೂಜಾರಿಗಳು ಒಂದೇ ಸವನೆ ಬೇಡಿಕೊಳ್ಳಹತ್ತಲು, ನಿಮ್ಮ ಮೊದಲನೆಯ ಸಂಚಿಕೆಯ ವೆಚ್ಚವನ್ನು ವಹಿಸಿಕೊಂಡದ್ದಲ್ಲದೆ, ಈ ಪಿಶಾಚಿಗಳು ಕಡೆತನಕ ನಮಗೆ ಗಂಟುಬಿದ್ದಾವೆಂದು ಎರಡನೆಯ ಸಂಚಿಕೆಯ ವೆಚ್ಚವನ್ನೂ ಒಪ್ಪಿಕೊಂಡಿರಬಹುದು ? ಇವರು ಹಣ ಕೊಟ್ಟವರನ್ನು ಹೊಗಳುತ್ತ ಕೊಡದವರನ್ನು ಬೊಗಳುತ್ತ "ಉದರ ನಿಮಿತ್ತಂ ಬಹುಕೃತ ವೇಷಂ" ಎಂಬಂತೆ ಮಠಮಾನ್ಯಗಳ ಹಣವನ್ನೆತ್ತಿ ನಿಮ್ಮ ಹೆಂಡರು

ಮಕ್ಕಳು, ಬಂಧುಬಳಗವನ್ನು ಸಲಹುವದರ ಸಲುವಾಗಿ ಹಣಗಳಿಸುವ ಈ ಹೊಸ ಹಂಚಿಕೆಯನ್ನು ಹುಡುಕಿ ತೆಗೆದು ತನ್ನ ಸ್ವಾರ್ಥವನ್ನು ಸಾಧಿಸುತ್ತ ಹೊರಟಿರುವ ಆ. ಮ. ಪಾಟೀಲರೇ, ಭಾರತೀಯರಿಗೆ ರಾಜಕೀಯ ಸ್ವಾತಂತ್ರ್ಯ ದೊಂದಿಗೆ ವಾಕ್ ಸ್ವಾತಂತ್ರ, ಲೇಖನ ಸ್ವಾತಂತ್ರ ಬಂದಿರುವದರಿಂದ ನೀವು "ಶರಣರ ಸಂಘ"ವೆಂಬ ಪವಿತ್ರ ನಾಮದ ಮರೆಯಲ್ಲಡಗಿ, ಶರಣರ ಮಾರ್ಗ ವೆಂಬ ತ್ರೈಮಾಸಿಕ ಹೊರಡಿಸಿ, ಅವರಲ್ಲಿ ಮನಸ್ಸಿಗೆ ಬಂದಂತೆ ಬರೆಯುವದು, ಬೇಡಾದವರ ಮೇಲೆ ವಿಷಕಾರಿ ಗ್ರಂಥಗಳನ್ನು ಮತ್ತು ಅಲ್ಲದ-ಸಲ್ಲದ ಲೇಖನ ಗಳನ್ನು ಬರೆಯುವದು ನಿಮ್ಮ ಸಂಘದ ಸ್ವಾತಂತ್ರ್ಯದ ಲಕ್ಷಣವೆಂದು ಕಾಣು ತ್ತದೆ. ಇದು ಎಷ್ಟು ಮಾತ್ರಕ್ಕೂ ಸರಿಯಲ್ಲ. ಜನರಿಗೆ ಸಂತೋಷವನ್ನು ಸನ್ಮಾರ್ಗವನ್ನುಂಟು ಮಾಡತಕ್ಕದ್ದೇ ಶರಣರ ಮಾರ್ಗ. ಇವನ್ನು ಬಿಟ್ಟು ಇತರರ ಮನಸ್ಸಿಗೆ ನೋವನ್ನುಂಟು ಮಾಡುವುದು, ಜನರಲ್ಲಿ ಕ್ರೋಧವನ್ನು ಕೆರಳಿಸುವುದು, ಸ್ವೇಚ್ಛಾ ಪ್ರವೃತ್ತಿಯ ಗೌರವಸ್ಥರ ಮೇಲೆ ಕೆಟ್ಟ ಲೇಖನವನ್ನು ಬರೆಯುವುದು, ಅವರನ್ನು ಹೆದರಿಸಿ, ಬೆದರಿಸಿ ಹಣವನ್ನು ವಸೂಲ ಮಾಡು ವುದು ಇವೇ ಮೊದಲಾದ ನಿಮ್ಮ ಕೃತಿಗಳು. ಇವಕ್ಕೆ ಶಿವಾನಂದ ಸ್ವಾಮಿಗಳ ಮಠದಿಂದ ಹಣವನ್ನು ವಸೂಲ ಮಾಡಿದ್ದೇ ಸಾಕ್ಷಿ.

ವೀರಶೈವ ಗುರುಸ್ಥಲ ಮಠದ ಅಪಪ್ರಚಾರಕ್ಕೆ ಕಾರಣವಾದ ಮಂತ್ರ ವಾದಿ ಹಾಗು ಶರಣರ ಮಾರ್ಗವೆಂಬ ತ್ರೈಮಾಸಿಕ ಪತ್ರಿಕೆಯನ್ನು ವೀರಶೈವ ಮತ ಪ್ರಗತಿಯನ್ನು ಬಯಸುವ ಜನರು ಓದಬಾರದು. ಇಂಥ ನಿಂದಕ ಜನ ಗಳನ್ನು ಪ್ರೋತ್ಸಾಹಿಸಲೂಬಾರದು. ಇಂಥ ನಿಂದಕರವಾದ ಸಾಹಿತ್ಯವನ್ನು ಓದುವದು, ಕೇಳುವದು ವಿಷದ ಅನ್ನವನ್ನುಂಡಂತೆ; ಕೆಟ್ಟ ನೀರು ಕುಡಿದಂತೆ; ಹೊಲಸು ಗಾಳಿಯನ್ನು ಸೇವಿಸಿದಂತೆ. "ಅನರ್ಥಕಾರಿ ಅಪಾಯಕಾರಿ" ಎಂಬಂತೆ ನಾವು ನಮ್ಮ ಜನಾಂಗವನ್ನು ಎಚ್ಚರಿಸಿದ್ದೇವೆ.

ಭಕ್ತರ ಅಜ್ಞಾನವೆಂಬ ಕಾರ್ಗತ್ತಲೆಯನ್ನು ತಮ್ಮ ಜ್ಞಾನ ತೇಜಸ್ಸಿನಿಂದ ತೊಡೆದು ಕುಮಾರ್ಗದಿಂದ ಸನ್ಮಾರ್ಗದ ಕಡೆಗೆ, ಮೃತ್ಯುತ್ವದಿಂದ ದೇವತ್ವದ ಕಡೆಗೆ ಒಯ್ಯುವ ಗುರುಸ್ಥಲ ಮಠಗಳು ನಮ್ಮ ಸಮಾಜದಲ್ಲಿ ಪ್ರತಿಯೊಂದು ಹಳ್ಳಿ ಪಟ್ಟಣಗಳಲ್ಲಿರುತ್ತವೆ. ಇವರು ಅಷ್ಟಾವರ್ಣ, ಪಂಚಾಚಾರ ಏಕೋತ್ತರ ಶತ ಸ್ಥಲ, ಶಿವದೀಕ್ಷಾ, ತ್ರಿವಿಧ ಲಿಂಗಪೂಜಾ ಇತ್ಯಾದಿ ತತ್ವಗಳನ್ನು ಭಕ್ತರಿಗೆ

ತಿಳಿಸಿ, ಹವ್ಯ-ಕವ್ಯಾದಿಗಳನ್ನು ಮಾಡುತ್ತ ಅಷ್ಟವರ್ಣಾಂತರ್ಗತ ಗುರುಜಂಗಮರಾಗಿ ವಂಶಪರಂಪರವಾಗಿ ಭಕ್ತರ ಕಡೆಯಿಂದ ಪೂಜಿಸಿಕೊಳ್ಳುತ್ತ ಬಂದಿದ್ದಾರೆ. ಇಂಥ ಗುರುಜಂಗಮರನ್ನು ಭಕ್ತರಲ್ಲಿಳಿಸಿ, ಹೊಸದಾಗಿ ಬೇಕಾದ ಜಾತಿಯ ಭಕ್ತರನ್ನು ಸಂಸ್ಕಾರ ಮಾಡಿ, ಹೊಸ ಗುರುಜಂಗಮರನ್ನು ಮಾಡಿದ್ದಾದರೆ— ವಿಶ್ವಾಮಿತ್ರನು ಪರಶಿವನ ವಿರುದ್ಧ ಸೃಷ್ಟಿ ಮಾಡಲಿಕ್ಕೆ ಹೋಗಿ ಆಕಳ ಬದಲು ಆಡು ನಿರ್ಮಿಸಿದಂತೆ, ತೆಂಗಿನಗಿಡದ ಬದಲು ಈಚಲಗಿಡ ನಿರ್ಮಿಸಿದಂತೆ ನೀವು ಮಾಡಿದ ಹೊಸ ಗುರುಜಂಗಮರು ಮಾನ್ಯವಾಗಲಾರರು. ಅಷ್ಟಾವರ್ಣಗಳಲ್ಲಿ ಗುರುಜಂಗಮರ ಸ್ಥಾನವು ಮುಖ್ಯವಾದದ್ದು. ಇವರಿಗೇನೇ ಧರ್ಮಾಧಿಕಾರದ ಯಾವತ್ತೂ ಹೊಣೆ ಇರುವದು. ವೀರಶೈವ ಧರ್ಮದೇವತೆಯ ಎರಡು ಕಣ್ಣುಗಳೇ ಸನಾತನ ವಂಶದ ಗುರುಜಂಗಮರು. ಇಂಥ ಗುರುಸ್ಥಾನವನ್ನು ಬಿಟ್ಟು ನೀವು ಹೊಸದಾಗಿ ನಿರ್ಮಿಸಿದ ಮೇಲೆ ಹೊಸ ಅಷ್ಟಾವರ್ಣವನ್ನೂ ಸಹ ಹುಟ್ಟಿಸಿದಂತಾಯಿತು. ಮತ್ತು:

ಶ್ಲೋಕ: ಶ್ರೀಶೈಲಜಂ ಕಂಠಂ ಧೃತಂ ಮದೀಯಂ । ಪ್ರಾತಸ್ತಥಾ ಸಾಯಮತಿ ಪ್ರವೀಣಾಃ । ಕರಾಂಬುಜೇನ್ಯಸ್ಯ ಯಜಂತಿ ಭಕ್ತಾಃ । ತದ್ಭಕ್ತಿ ಭಾವೇನ ವಸಾಮಿ ದೇವಿ ।

ಎಂಬಂತೆ, ವೀರಶೈವರಲ್ಲಿ ಗುರುಸ್ಥಲದಯ್ಯನವರು ಹೇಗೆ ಶ್ರೇಷ್ಠರೋ ಹಾಗೆ ಶಿಲೆಗಳಲ್ಲಿ ಶ್ರೀಶೈಲ ಶಿಲೆ ಉತ್ತಮವೆಂದಿದ್ದಾರೆ. ಇಂಥ ಶಿಲೆಯಿಂದ ನಿರ್ಮಿಸಲ್ಪಟ್ಟ ಲಿಂಗವನ್ನು ಬಿಟ್ಟು, ನಿಮ್ಮ ಸಂಘವು ಮತ್ತೆ ಯಾವ ಧಾತುವಿನ ಲಿಂಗವನ್ನು ನಿರ್ಮಿಸಲ್ಪಟ್ಟಿರುವದು ತಿಳಿಸಿರಿ.

ಶ್ಲೋಕ: ಲಿಂಗವೃತ್ತಸಮಂ ಪೀಠದೈರ್ಘ್ಯಂ ವಿಸ್ತಾರ ಏವಚ । ತದರ್ಧಂ ಗೋಮುಖಂ ಚೈವ ಪ್ರೋಕ್ತಂ ಲಿಂಗಸ್ಯ ಲಕ್ಷಣಂ ॥

ಹೀಗೆ ಮತಸ್ಥಾಪನಾಚಾರ್ಯರು ಪಂಚಸೂತ್ರ ಲಿಂಗ ನಿರ್ಮಿಸಿ, ಇಷ್ಟಲಿಂಗವೆಂದು ಹೆಸರಿಟ್ಟಿರುವರು. ಇದನ್ನು ಬಿಟ್ಟು ನೀವು ಯಾವ ಸೂತ್ರದಿಂದ ಲಿಂಗ ನಿರ್ಮಿಸಿ, ಇಷ್ಟಲಿಂಗ ಬಿಟ್ಟು ಯಾವ ನಾಮಕರಣ ಮಾಡಿರುವಿರಿ ತಿಳಿಸಿರಿ.

ಶ್ಲೋಕ: ಉತ್ತಮಾಂಗೇ ಗಲೇ ಬಾಹೌ ಹೃದಿ ವಕ್ಷಸ್ಥಲೇಪಿವಾ । ಮತ್ರಾಣಲಿಂಗಂ ಯೋಧತ್ತೇ ಸ್ಥಿತಸ್ತತ್ಸನ್ನಿಧಾವಹಂ ।

ಹೀಗೆ ಶಿರಸ್ಸಿನಲ್ಲಾಗಲಿ, ಕೊರಳಲ್ಲಾಗಲಿ, ತೋಳಿನಲ್ಲಾಗಲಿ, ವಕ್ಷಸ್ಥಲ ದಲ್ಲಾಗಲಿ ಧರಿಸಬೇಕೆಂದು ಹೇಳಿರುವದರಿಂದ, ಇವೆಲ್ಲವನ್ನು ಬಿಟ್ಟು ನಿಮ್ಮ ಸಂಘದಿಂದ ಹುಟ್ಟಿದ ಲಿಂಗವನ್ನು ಯಾವ ಸ್ಥಾನದಲ್ಲಿ ಧರಿಸಲು ನಿರ್ಧರಿಸಿರುವಿರಿ ?

## ಜಂಗಮ ವಿಷಯ:

ಶ್ಲೋಕ: ಏಕಮೂರ್ತಿಸ್ತ್ರಯೋಭಾಗಾ ಗುರುರ್ಲಿಂಗಂ ಚ ಜಂಗಮಂ । ಜಂಗಮಂ ಚ ಗುರುರ್ಲಿಂಗಂ ತ್ರಿವಿಧಂತ್ವೇಕ ಮುಚ್ಯತೇ ॥

ಹೀಗೆ ಒಂದು ಮೂರ್ತಿಯೇ ಗುರುವೆಂತಲೂ ಲಿಂಗವೆಂತಲೂ ಜಂಗಮ ವೆಂತಲೂ ಮೂರು ಭಾಗಗಳಾಗಿರುವದು. ಗುರುಲಿಂಗಜಂಗಮ ಇವು ಮೂರೂ ಒಂದೇಯಾಗಿರುವವು. ಇಂಥ ಸನಾತನ ಜಂಗಮರನ್ನು ಬಿಟ್ಟು, ಯಾವ ಕುಲದವರನ್ನು ಜಂಗಮ ಸ್ಥಾನಕ್ಕೆ ತೆಗೆದುಕೊಂಡಿರುವಿರಿ ?

## ಭಸ್ಮಕ್ರಮ:

ಶ್ಲೋಕ: ನಂದಾಭದ್ರಾಚ ಸುರಭಿಸ್ಸುಶೀಲಾ ಸುಮನಾಸ್ತಥಾ ।
ಪಂಚಗಾವೋ ವಿಭೋರ್ಜಾತಸ್ಯದ್ಯೋಜಾತಾದಿ ವಕ್ತ್ರತಃ ॥

ಎಂಬಂತೆ ಇಂಥ ಗೋವುಗಳ ಶಗಣಿಯಿಂದ ಭಸ್ಮವನ್ನು ತಯಾರ ಮಾಡಿಸಿ, ಗುರುಗಳಿಂದ ಸಂಸ್ಕಾರ ಮಾಡಿಸಿ ಧರಿಸುತ್ತಿದ್ದಾರೆ. ಇಂಥ ಗೋವುಗಳ ಶಗಣಿಯನ್ನು ಬಿಟ್ಟು, ನೀವು ಯಾವ ಪಶುಗಳ ಶಗಣಿಯಿಂದ ಭಸ್ಮ ವನ್ನು ತಯಾರಿಸುತ್ತಿದ್ದೀರಿ ?

## ರುದ್ರಾಕ್ಷಿ:

ಶ್ಲೋಕ: ಪುರಾ ತ್ರಿಪುರ ಸಂಹಾರೆ ತ್ರಿಣೇತ್ರೋ ಜಗತಾಂ ಪತಿಃ । ಉದಪಶ್ಯತ್ಪುರಾಂ ಯೋಗ ಮುನ್ಮೀಲತನಿಲೋಚನಃ ॥ ನಿಪೇತುಸ್ತಸ್ಯನೇತ್ರೇಭ್ಯೋ ಬಹವೋ ಜಲಬಿಂದು ವಃ । ತೇಭ್ಯೋ ಜಾತಾಹಿ ರುದ್ರಾಕ್ಷಾ ರುದ್ರಾಕ್ಷಾ ಇತಿಕೀರ್ತಿ ತಾಃ । ರುದ್ರನೇತ್ರ ಸಮುತ್ಪನ್ನಾ ರುದ್ರಾಕ್ಷಾ ಲೋಕ ಪಾವನಃ ।

ಹೀಗಿದ್ದ ರುದ್ರಾಕ್ಷಿಯನ್ನು ಮತಸ್ಥಾಪನಾಚಾರ್ಯರು ಕಂಡುಹಿಡಿದು, ಶಿಷ್ಯಾವರ್ಣಗಳಲ್ಲಿ ಸಂಸ್ಕಾರ ಮಾಡಿ ಸೇರಿಸಿರುವರು. ಇದರ ಬದಲಾಗಿ ನೀವು ಯಾವ ನೇತ್ರದ ರುದ್ರಾಕ್ಷಿಯನ್ನು ತಯಾರಿಸಿರುವಿರಿ ?

**ಪಾದೋದಕ:**

ಶ್ಲೋಕ: ಏಕ ಮೂರ್ತಿಸ್ತ್ರಯೋಭಾಗಾ ಗುರುರ್ಲಿಂಗಂತು ಜಂಗಮಃ । *
ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದ
ಸ್ಯಾಮೃತಂ ದಿವಿ

ಹೀಗೆ ಗುರುಲಿಂಗ ಜಂಗಮವೆಂಬ ಹೆಸರಿನಿಂದ ಜಂಗಮ ಒಂದೇ ಉದಿತ ವಾಯಿತೆಂದು, ಈ ಜಂಗಮ ಪಾದವೇ ಸರ್ವಾದಿಷ್ಟ ಸ್ಥಾನವೆಂದು, ಇಂಥ ಪಾದದಿಂದ ದಿವ್ಯಾಮೃತ ಲಭಿಸುವದೆಂದು ಶೃತಿಯು ಸಾರುತ್ತಿರುವಾಗ ಇಂಥ ಪಾದವನ್ನು ಬಿಟ್ಟು, ನಿಮ್ಮ ಹೊಸ ಪಾದೋದಕ ಮೊಣಕಾಲಿನಿಂದ ತೆಗೆದು ಮೊಣಕಾಲೋದಕವೆಂದು ಹೆಸರಿಟ್ಟಿರುವಿರೋ ಹೇಗೆ ?

**ಮಂತ್ರ:**

ಶ್ಲೋಕ: ಶಿವತತ್ತ್ವಾತ್ಪರಂ ನಾಸ್ತಿಯಥಾ ತತ್ವಾಂತರಂ ಮಹತ್ ।
ತಥಾ ಪಂಚಾಕ್ಷರಿ ಮಂತ್ರಾನ್ನಾಸ್ತಿ ಮಂತ್ರಾಂತರಂ ಮಹಾತ್ ।

ಈ ಪ್ರಕಾರ ಪಂಚಾಕ್ಷರಿ, ಷಡಕ್ಷರಿ ಮಂತ್ರಗಳನ್ನು ಮತಸ್ಥಾಪನಾ ಚಾರ್ಯರು ಅಷ್ಟಾವರ್ಣಗಳಲ್ಲಿ ಸೇರಿಸಿದ್ದಾರೆ ಇಂಥ ಮಂತ್ರಗಳನ್ನು ಬಿಟ್ಟು ನಿಮ್ಮ ಸಂಘದಿಂದ ಯಾವ ಮಂತ್ರವನ್ನು ಸೇರಿಸಿರುವಿರಿ ?

**ಪ್ರಸಾದ:**

ಶ್ಲೋಕ: ಪ್ರಸಾದಂ ತ್ರಿವಿಧಂ ಪ್ರೋಕ್ತ ಶುದ್ಧಂ ಸಿದ್ಧಂ ಪ್ರಸಿದ್ಧಕಂ ।
ಶುದ್ಧಂ ಲಿಂಗ ಮುಖಾತ್ತ್ಯಕ್ತಂ ಸಿದ್ಧಂ ಚರವಿಸರ್ಜಿತಂ ।
ಪ್ರಸಿದ್ಧಂ ಗುರುಣಾತ್ಮಕಂ ಇತ್ಯೇತ ತ್ರಿವಿಧಂ ಸ್ಮೃತಂ ।

ಇಂಥ ತ್ರಿವಿಧ ಗುರು ಲಿಂಗ ಜಂಗಮ ಪ್ರಸಾದ ತೆಗೆದು ಹಾಕಿ, ನಿಮ್ಮ ಶರಣರ ಸಂಘದಿಂದ ಯಾವ ಪ್ರಸಾದ ನಿರ್ಮಿಸಿರುವಿರಿ ? ತಿಳಿಸಿರಿ.

ವೀರಶೈವ ಸಮಾಜದಲ್ಲಿ ಗುರುಜಂಗಮ ವಂಶವು ಅಚ್ಚಳಿಯದೆ ಇಲ್ಲೀ ಪರ್ಯಂತರ ಅಷ್ಟಾವರ್ಣಾಂತರ್ಗತ ಗುರುಜಂಗಮರಾಗಿ ಬಂದಿದ್ದಾರೆ. ಈ ಗುರುಸ್ಥಾನವನ್ನು ಬದಲಿಸಲು ಬರುವದಿಲ್ಲ. ವನದಲ್ಲೆಲ್ಲ ಕಲ್ಪವೃಕ್ಷಗಳಿರುವ ದಿಲ್ಲ; ಮನೆಮನೆಗಳಲ್ಲೆಲ್ಲ ಕಾಮಧೇನುಗಳಿರುವದಿಲ್ಲ. ಅವು ಪವಿತ್ರ ಸ್ಥಳಗಳ

---

* ಹೀಗೆ ಮೂರು ಹೆಸರನ್ನು ಹೊಂದಿರುವ ಶಿವನಿಗೆ ತ್ರಿಪಾತ್ ಎಂಬ ಹೆಸರು ಬಂದಿರುವದೆಂದು ಆಗಮದಲ್ಲಿ ಹೇಳಲ್ಪಟ್ಟಿರುವದು.

ಸ್ನಾಶ್ರಯಿಸಿಕೊಂಡಿರುವಂತೆ, ವಿಶೇಷತಃ ಸದ್ವಂಶದ ಶೈವೀಸಂಪತ್ತಿನ ಗುರು ಸ್ಥಲವನ್ನಾಶ್ರಯಿಸಿಕೊಂಡ ಅಷ್ಟಾವರ್ಣಗಳಿರುತ್ತವೆ. ಪ್ರತಿ ಪಕ್ಷದ ಹಾರಾಟ ಎಷ್ಟು ನಡೆದರೂ ಸನಾತನ ಧರ್ಮವು ಕೂದಲೆಳೆಯಷ್ಟು ಸಹ ಕೋಂಕುವ ದಿಲ್ಲ. ಆಗಂತುಕ ನಿಮ್ಮ ಸಂಘದ ಧರ್ಮಾಚರಣೆ ಎಷ್ಟು ಸಾಧುವಾಗಿ ಕಂಡರೂ ಸನಾತನ ಸ್ವಧರ್ಮದಾಚರಣೆಯ ಮುಂದೆ ಅದನ್ನು ವಮನದಂತೆ ಭಾವಿಸುವರು. ನೀವು ಎಷ್ಟೇ ಲೇಖನಗಳನ್ನು ಬರೆದರೆ ಸನಾತನ ವೀರಶೈವ ಧರ್ಮ ಜೋಲು ಬೀಳದೆ ಸ್ವಧರ್ಮವನ್ನುಳಿಸಿಕೊಳ್ಳುವದು. ನಮ್ಮ ಸಮಾಜದಲ್ಲಿ ಪಂಚಾಚಾರ್ಯರ ಧರ್ಮ ಪೀಠಗಳು ಹಿಮವತ್ ಕೇದಾರ, ಕಾಶಿ, ಶ್ರೀಶೈಲ, ರಂಭಾಪುರಿ, ಉಜ್ಜಯನಿ ಇವು ಭರತ ಖಂಡದೊಳಗಿನ ಪುಣ್ಯ ಕ್ಷೇತ್ರಗಳಲ್ಲಿ ನೆಲೆಸಿ ಕಂಗೊಳಿ ಸುತ್ತಿರುವವು. ಈ ಪೀಠಾಚಾರ್ಯರು, ಷಟಸ್ಥಲ ಪಟ್ಟಾಧಿಕಾರಿಗಳು ದೇಶದ ಲ್ಲೆಲ್ಲ ಸಂಚರಿಸಿ, ಭಕ್ತವೃಂದದ ಅನುಮತಿಯಿಂದ ಸಮಾಜದಲ್ಲಿ ಧರ್ಮದ ಚ್ಯುತಿಯಾಗದಂತೆ ವ್ಯವಸ್ಥೆಯನ್ನಿಡುವದು ಮತ್ತು ಭಕ್ತರಿಂದ ದೊರೆತ ಕಾಣಿಕೆ ಮೊದಲಾದವುಗಳಿಂದ ಧರ್ಮೋತ್ಕರ್ಷದ ಕಾರ್ಯವನ್ನು ನೆರವೇರಿಸುವದು ಇವರ ಕರ್ತವ್ಯಗಳಾಗಿವೆ.

ಇದಲ್ಲದೆ ಎಲ್ಲ ಹಳ್ಳಿ–ಪಟ್ಟಣಗಳಲ್ಲಿ ಗುರುಸ್ಥಲದ ಪ್ರಾಪಂಚಿಕ ಮಠದಯ್ಯ ನವರ ಕೈಕೆಳಗೆ ಮಟಪತ್ತಿ, ಗಣಾಚಾರಿ, ಸ್ಥಾವರ, ಕುಮಾರ, ಗಣಕುಮಾರ ಎಂಬ ಉಪಾಚಾರ್ಯರಿರುವರು. ಗ್ರಾಮದೊಳಗಿನ ಸೆಟ್ಟಿ, ಬಣಕಾರ ಇತ್ಯಾದಿ ಗ್ರಾಮಾಧಿಕಾರಿಗಳು ಸಹಾಯ ಮಾಡಿ, ಧರ್ಮದ ಕಾರ್ಯಗಳನ್ನು ನೆರವೇರಿ ಸುತ್ತ ಬಂದಿದ್ದರಿಂದ ರಾಜಾಧಿರಾಜರು, ದೇಸಾಯಿ–ದೇಶಪಾಂಡೆಯರಿಗೆ ಗುರು ಗಳಾದ್ದರಿಂದ ಈ ಮಠಗಳಿಗೆ ಸ್ವಾಸ್ತಿವೃತ್ತಿಗಳು ದೊರಕಿರುತ್ತವೆ. ಈ ಗುರು ಸ್ಥಲದ ಮಠಾಧಿಕಾರಿಗಳು ಅನೇಕ ರೋಗಗಳಿಂದ ನರಳುತ್ತಿರುವವರಿಗೆ ತಕ್ಕ ಚಿಕಿತ್ಸೆಯನ್ನು ಮಾಡಿ ಆರೋಗ್ಯಪಡಿಸುವ ವೈದ್ಯಮಂದಿರಗಳಾಗಿವೆ. ಈ ಮಠಸ್ಥರು ಭಕ್ತರ ಭವವೆಂಬ ರೋಗವನ್ನು ನಾಶಮಾಡುವರು. ಅಜ್ಞಾನವೆಂಬ ಕತ್ತಲೆಯಿಂದ ಅಂಧರಾದವರ ನೇತ್ರಗಳನ್ನು ಜ್ಞಾನವೆಂಬ ಅಂಜನದಿಂದ ನಿಚ್ಚಳ ಮಾಡತಕ್ಕವರಾಗಿರುವರು. ಹೀಗೆ ವಂಶಪರಂಪರವಾಗಿ ಇಲ್ಲಿಯ ವರಿಯಂತರ ಬಂದ ಮಠಸ್ಥಲದವರನ್ನು ಕಿತ್ತುಚಲ್ಲಿ, ಆಗಂತುಕ ಗದಗಿನ "ಶರಣರ ಸೇವಾ ಸಂಘ"ವೆಂಬ ಅನಾಧಿಕಾರಿಗಳು ಈ ಸ್ಥಲಗಳಲ್ಲಿ ಬೇಕಾದ ಜಾತಿಯವರನ್ನು

ಸಂಸ್ಕಾರ ಮಾಡಿ ತರಲಿಕ್ಕೆ ಬರುತ್ತದೆ ಎಂದು ಹೇಣಗಾಡಹತ್ತಿದ್ದಾರೆ. ಇಂಥ ವ್ಯಕ್ತಿಗಳ ಆಚಾರ-ವಿಚಾರಗಳಿಗೆ ಮಹತ್ವವೇ ಇರುವದಿಲ್ಲ.

ಧಾರವಾಡದ ಶ್ರೀ ಮುರುಘರಾಜೇಂದ್ರ ತ್ರಿದಾಸೋಹ ಮಠದ ಮೃತ್ಯುಂಜಯ ಮಹಾ ಸ್ವಾಮಿಗಳನ್ನೂ ಇವರ ಶಿವಾನುಭವ ಸಂಘವನ್ನೂ ಮನಸ್ಸಿಗೆ ಬಂದಂತೆ ನಿಂದಿಸುವ ಗದಗಿನ ಶರಣ ಸಂಘದವರು ಸ್ವೇಚ್ಛಾಪ್ರವರ್ತನೆಗೆ ಮೆಚ್ಚಿದವರಾಗಿರುವರು. ಅಹಂಕಾರವೆಂಬ ಕರಾಳ (ರಾಕ್ಷಸ) ನಿಗೆ ತುತ್ತಾದವರಲ್ಲಿ ಮರ್ಯಾದೆ, ಘನತೆ, ಕರುಣಾಭಾವನೆ ಇವುಗಳಿಗೆ ಪ್ರತಿಯಾಗಿ ನೀಚಸ್ವಾರ್ಥತೆ, ಅಸೂಯೆ, ಜಾಡಿ, ನಿಷ್ಕರುಣತೆಗಳು ಮನೆಮಾಡಿಕೊಂಡಿರುವವು. ಈ ಅಹಂಕಾರವು ದೈವೀಸಂಪತ್ತನ್ನು ತಗ್ಗಿಸಿ, ಅಸುರೀ (ರಾಕ್ಷಸ) ಸಂಪತ್ತನ್ನು ವೃದ್ಧಿ ಮಾಡುವದು, ಧರ್ಮವನ್ನು ತಗ್ಗಿಸಿ, ಅಧರ್ಮವನ್ನು ಹೆಚ್ಚಿಸುವದು; ಮತ್ತು ಇವರಲ್ಲಿ ಲಜ್ಜೆ ಎಂಬುದು ತಿಲಾಂಶವೂ ಇರುವದಿಲ್ಲ. ಯಾವಾಗಲೂ ಪರರ ಮೇಲೆ ಟೀಕೆ ಮಾಡುವದು, ಸಮಾಜ ಕೆಟ್ಟು ಹೋಗಿದೆ.... ಇತ್ಯಾದಿ ಉದ್ಗಾರಗಳನ್ನು ತೆಗೆಯುವದು ಈ ದುರಹಂಕಾರಿಗಳ ಸ್ವಭಾವವಾಗಿರುತ್ತದೆ. ಹೀಗೆ ಮಾಡುತ್ತಿದ್ದರೆ ಜನರು ತಮ್ಮನ್ನು ಒಳ್ಳೇ ಸಮಾಜ ಸುಧಾರಕರೆಂದು, ಸಮಾಜದ ಮುಂದಾಳುಗಳೆಂದು ತಿಳಿದುಕೊಂಡಿರುತ್ತಾರೆಂದು ಈ ಶರಣ ಸಂಘದವರ ಹವಣಿಕೆಯು. ಆದರೆ ಈ ಅಜ್ಞಾನಾಂಧರ ಸಂಘವು ಪ್ರಚಂಡವಾದ ಬಿರುಗಾಳಿಗೆ ಸಿಕ್ಕ ಹದಗಿನಂತೆ ಮನಸ್ಸಿನ ಎಳೆತಕ್ಕೆ ಸಿಕ್ಕು, ಅತ್ತಿತ್ತ ಅಲೆದಾಡಿ, ಪೆಟ್ಟುತಿಂದು, ನುಚ್ಚುನುಗ್ಗಾಗಿ ಕೊನೆಗೆ ನಾಶಕ್ಕೂ ಗುರಿಯಾಗುವದು. ಸನಾತನ ಧರ್ಮದ ಸತ್‌ಕ್ರಿಯೆಯೆಂಬ ಬುತ್ತಿಯನ್ನು ಸಂಪಾದಿಸಿಕೊಳ್ಳಿರಿ. ಸುಮ್ಮನೆ ದುರಭಿಮಾನಕ್ಕೆ ಬಿದ್ದು ಕೆಡಬೇಡಿರಿ. ಸ್ವಾರ್ಥಕ್ಕಾಗಿ ಪರರ ಹಾನಿಯನ್ನು ಮಾಡಲಿಕ್ಕೆ ಹೋಗಬೇಡಿರಿ. ಅದೂರದರ್ಶಿಗಳು ಸ್ತೋತ್ರಪ್ರಿಯರು ಕ್ಷುಲ್ಲಕ ಬುದ್ಧಿಯವರಾಗಿ ಸನಾತನ ಗುರುಜಂಗಮಕ್ಕೆ ಕೆಡುಕನ್ನೂ ಇವರ ಸ್ಥಾನ-ಮಾನದ ನಾಶವನ್ನೂ ಮಾಡಬೇಕೆನ್ನುತ್ತಿರುವ ನಿಮ್ಮ ಮಹತ್ವಾಕಾಂಕ್ಷೆಯನ್ನೂ ಬಿಟ್ಟು, ಸನಾತನ ಗುರುಜಂಗಮಕ್ಕೆ ಶರಣಾಗತರಾಗಿ ಬಸವಾದಿ ಪ್ರಮಥರಂತೆ ಗುರುಲಿಂಗಜಂಗಮರಲ್ಲಿ ಭಕ್ತಿಯಿಟ್ಟು ಬಾಳಿರಿ.

**ಪ್ರಶ್ನೆ:** ಶಿರಾಳಕೊಪ್ಪದ ಚನ್ನಮಲ್ಲಪ್ಪನವರು ತಮ್ಮ ಸದ್ಧರ್ಮ ದೀಪಿಕೆಯ ೧೨೩ನೇ ಸಂಚಿಕೆಯಲ್ಲಿ ವೀರಶೈವರಲ್ಲಿ ಜಂಗಮ (ವಿರಕ್ತ) ರಿಗೆ ಹೆಂಡರಿಲ್ಲ

ವೆಂಬುದು ಪ್ರಸಿದ್ಧ. ಹೀಗಿದ್ದ ಮೇಲೆ ಜಂಗಮರ ಹೆಂಡರಲ್ಲಿ ಜಂಗಮ ಹುಟ್ಟುವ ದೆಂತು ? ಇದು ಉಸುಕಿನಲ್ಲಿ ಎಣ್ಣೆ ತೆಗೆಯುವಷ್ಟು ಅಸಂಭವದ ಮಾತಾಗಿದೆ. ಆದ್ದರಿಂದ ಜನ್ಮತಃ ಜಂಗಮ ಕುಲ, ಗುರುಕುಲಗಳೆಂಬ ಅಶಾಸ್ತ್ರೀಯ ನಾಮ ಗಳನ್ನು ಪಂಡಿತರಾದವರು ಹೇಳುವದನ್ನು ಬಿಡುವದೊಳಿತಲ್ಲವೇ. ಎಂದು ಬರೆ ದಿರುವರು.

**ಉತ್ತರ:** ಗುರುವೆಂತಲೂ ಆಚಾರ್ಯನೆಂತಲೂ ದೇಶಿಕನೆಂತಲೂ ಆರಾಧ್ಯನೆಂತಲೂ ಈ ಗುರುಸ್ಥಲವವರಿಗೆ ಪರ್ಯಾಯನಾಮಗಳಿರುವದರಿಂದ "ಆರಾಧಿತುಂ ಯೋಗ್ಯಃ = ಆರಾಧ್ಯಃ" ಎಂಬ ಉತ್ಪತ್ತಿಯಿಂದ ಸರ್ವರಿಂದಲೂ ಪೂಜಿಸಿಕೊಳ್ಳಲಿಕ್ಕೆ ಯೋಗ್ಯನಾದವನೇ ಆರಾಧ್ಯನೆನಿಸಿಕೊಳ್ಳುವವರಿಂದ:

ಶ್ಲೋಕ: ಆರಾಧ್ಯ ಗರ್ಭಸಂಭೂತ ಆತ್ಮತತ್ವ ವಿಶಾರದಃ ।
ಧಾರಾಪುತ್ರ ಸಮಾಯುಕ್ತೋ ಆರಾಧ್ಯಸ್ಥಿರ ಜಂಗಮಃ ॥

ಹೀಗೆ ಶಿವಾಗಮದಲ್ಲಿ ಹೇಳಿದ ಪ್ರಕಾರ ಗುರುಸ್ಥಲದ ಸಂಸಾರಿಗೂ ಜಂಗಮನಾಮವಿರುವದರಿಂದ:

ಶ್ಲೋಕ: ಗುರುಸ್ಥಲ ಸಮಾಖ್ಯಾತಾ ವೀರಮಾಹೇಶ್ವರಾಭಿದಾಃ । ಏತೇಗುರು ಪದಾಧ್ಯಕ್ಷಾನ್ಯಲಾಂಛನ ಧಾರಿಣಿ । ಅತಃ ಸ್ವವಂಶಜಾನ್ ಬಾಲಾನ್ ಗೃಹಿತ್ವಾತನ್ವರಾನನೇ । ವೀರಮಾಹೇಶ್ವರೀಂ ದೀಕ್ಷಾಂ ಕೃತಾತೇಪುತ್ರ ವರ್ಗಿಣಃ । ಪಟ್ಟಾಭಿಷೇಕ ಯುಕ್ತಾಂ ಶ್ಚ ಕಂಕ ಮುದ್ರಾನ್ವಿತಾನ್ ಭುವಿ । ಷಟ್‌ಸ್ಥಲ ಜ್ಞಾನ ಸಂಪನ್ನಾನ್ ಕುರ್ವಂತಿ ಚರ ಸಂಜ್ಞಕಾನ್ ॥

ಈ ಪ್ರಕಾರ "ವೀರಶೈವ ಸದಾಚಾರ ಸಂಗ್ರಹ"ದಲ್ಲಿ ಹೇಳಿದೆ. ಸಂಸಾರಿ ಗುರುಜಂಗಮಾಧಿಕಾರಿಗಳು ವಂಶಪರಂಪರವಾಗಿ ಲಗ್ನವಾಗುತ್ತ ಗುರುಜಂಗಮ ಕುಲಗಳು ಆದಿಯಿಂದ ಬಂದಿರುತ್ತದೆ. ಈ ಗುರುಸ್ಥಲದ ಮಠದಯ್ಯನವರಿಂದ ಪಟದಪ್ಪನವರು, ವಿರಕ್ತ ಜಂಗಮರು ಹುಟ್ಟಿರುವರೆಂದು ತಿಳಿಯದೆ, ವಿರಕ್ತ ಜಂಗಮರಿಗೆ ಲಗ್ನವಿಲ್ಲೆಂಬುದು ತಿಳಿದು ಹೀಗೆ ಬರೆಯುವ ಚನಮಲ್ಲಪ್ಪನವರ ಮೂರ್ಖತನದ ಲೇಖನಕ್ಕೆ ಜ್ಞಾನಿಗಳು ನಗದಿರರೇ ! ಜನ್ಮತಃ ಜಂಗಮಕುಲ, ಗುರುಕುಲಗಳೆಂಬುವು ಶಾಸ್ತ್ರ ಸಮ್ಮತ ನಾಮಗಳೆಂದು ತಿಳಿಯಿರಿ.

ಇನ್ನು ವೀರಶೈವರು **ಗಂಧ, ಕುಂಕುಮ, ಅಕ್ಷತೆ** ಧರಿಸಬಾರದೆಂಬ ಇವರ ಅವಿವೇಕತನದ ಲೇಖನವನ್ನು ವಿಚಾರಿಸುವಾ.

ರದ್ರಾಭಿಷೇಕವಾದ ಲಿಂಗಕ್ಕೆ ಗಂಧ, ಕುಂಕುಮ, ಅಕ್ಷತೆಗಳನ್ನು ಧರಿಸ ಬೇಕೋ, ಬೇಡವೋ ಎಂಬುದಕ್ಕೆ "ವೀರಶೈವಾಮೃತ ಪುರಾಣ"ವಲ್ಲಿ ಏಳನೆಯ ಕಾಂಡ, ಹತ್ತನೇ ಸಂಧಿಯಲ್ಲಿಯ ಪದ್ಯಗಳನ್ನು ನೋಡಿರಿ.

ಪದ್ಯ: ಗಂಧ ಮೋರಣಕ್ಷತೆ ಪುಷ್ಪ ದೂಪ ದೀಪಂ ಮಿಸಗು । ವಾರೋಗಿಪದು
ಸುತಾಂಬುಲಾಷ್ಟ ವಿಧಪೂಜೆಯು ಸುರ್ದನಾ ಹಲಗಿಯಾರ್ಯಂ ||

ಪದ್ಯ: ಇಂತೆಂದು ಕೆಂಚ ವೀರಾಖ್ಯಂಗೆ ಸತ್ಪುಪೆಯ । ನಾಂತು ಹಲಗಿಯ
ದೇಶಕಂ ನಿರುಪಿಸಿದನೋ ರಂತೆಯಾಗಂಧ ಪ್ರಕಾರಮುಂ ಕೇಳ್ಕಿ
ಕ್ರಿಯಾಸಾರದೊಳು ಕುಮಾರಾ || ಮುಂತೆಯಾ ಚಂದನಾಗರು
ಸುಕರ್ಪುರಮ । ತ್ಯಂತ ಶೋಭನದ ಕುಂಕುಮ ವಿಲಸದನು ಲೇಪ ||
ವಿಂತೀಶ್ವರಂಗೆ ಯೋಗ್ಯ ಗೆಳೆವಕೆಣೆಯಿಲ್ಲವೆಂದು ಪೇಳುತಿರ್ದನು ||

ಪದ್ಯ: ಮಿಗೆ ಗಂಧವನು ಲೇಪದಿಂದೆಯಾ ಚಂದನಂ । ದ್ವಿಗುಣ ಪುಣ್ಯಮಂ
ಬಳಿಕ್ಕವದರಿಂದ ಲೆಂಟು ಮಡಿ । ಯಗರುತ ತ್ರಿಗುಣವೇ ಕರಿಯ ಗಿಲ
ದಕ್ಕೆ ನೂರ್ಮಡಿ ಕುಂಕುಮದ ಸುಗಂಧಂ || ಬಗಿಯ ನಾಲಿಸು ಚಂದ
ನಾಗರು ಸುಕರ್ಪುರಂ । ಮಘಮಘಿಸಲೊಂದಿಸುತ ಕುಂಕುಮುದ ಹುಡಿ
ಗೆಯ್ದು ಸೊಗಸಲತಿ ಸಂಣಸುರೆನಯ ವಾಮದಂ ಶಂಕರಂಗೆ ಲೇಪಿಸುವ
ವಕ್ಕರಿಂ ||

ಚಂದನ, ಅಗರು, ಕರ್ಪೂರ, ಕುಂಕುಮಾನುಲೇಪನಗಳು ಶಿವನಿಗೆ ಯೋಗ್ಯ. ಇವುಗಳಲ್ಲಿ ಗಂಧಕ್ಕಿಂತಲೂ ಚಂದನವು ದ್ವಿಗುಣ ಪುಣ್ಯ ಫಲವು. ಅದಕ್ಕಿಂತಲೂ ಅಗರು ಎಂಟು ವಿಧ ಪುಣ್ಯವು. ಅದಕ್ಕಿಂತಲೂ ಕರಿಯಗರು ದ್ವಿಗುಣ ಫಲವು. ಅದಕ್ಕಿಂತಲೂ ಕುಂಕಮ, ಕೇಶರ, ಗಂಧವು ಶತವಿಧ ಪುಣ್ಯ ಫಲವು. ಚಂದನಾಗರು, ಕರ್ಪೂರ, ಕುಂಕುಮಗಳನ್ನು ಸಂಣಗೆ ಹುಡಿಮಾಡಿ ಶಿವನಿಗೆ ಲೇಪಿಸುವದು. ಹೀಗೆ ಜ್ಞಾನದಿಂದಾಗಲಿ, ಅಜ್ಞಾನದಿಂದಾಗಲಿ ಚಂದ ನಾಗರು-ಕುಂಕುಮಗಳನ್ನು ಶಿವನಿಗೆ ಅರ್ಪಿಸಿದರೆ ಎಲ್ಲ ವಿಧದ ಪಾಪಗಳು ನಾಶವಾಗಿ ಭೂಲೋಕದಲ್ಲಿ ಸುಖ-ಭೋಗಗಳನ್ನನುಭವಿಸಿ ಮುಂದೆ ಕೈಲಾಸ ಹೊಂದುವರೆಂದು ಕ್ರಿಯಾಸಾರದಲ್ಲಿ ಬರೆದಿರುವರು. ಇದೂ ಅಲ್ಲದೆ, ಮಗ್ಗಿ ಮಾಯಿದೇವರು ತಮ್ಮ "ಶಿವಾಧವ ಶತಕ"ದಲ್ಲಿ:

ಪದ್ಯ: ಅರಸಿನ ಗಂಧ ಚಂದ್ರ ಕಚ ಮಾಲ್ಯ ವಿಲೇಪನ ವಸ್ತ್ರಭೂಷಣೋ |
ತ್ಕರ ರಚನಾ ವಿಲಾಸಮಯ ಶೋಭೆ ವಿಚಾರಿಸೆ ಗಂಧನುಳ್ಳಚಿ | ಲ್ವರಸಿಗೆ
ಯೋಗ್ಯಮೋ ಬಣಗು ಮುಂಡಿಗೆ ಯೋಗ್ಯಮೋ ಲಿಂಗಸಂಗತ | ತ್ವರ
ಶರಣಂಗೆ ಸರ್ವವಿಧ ಭೋಗ ಸುಖಂ ಪೆರತೇಂ ಶಿವಾಧವಾ ||

ಹೀಗೆ ಅಂದಿದ್ದಾರೆ. ಮತ್ತು ಇಷ್ಟಲಿಂಗಕ್ಕೆ ಗಂಧ-ಕುಂಕುಮಾದಿಗಳನ್ನು ಧರಿಸಬೇಕೆಂದು "ಗಣಭಾಷ್ಯ ರತ್ನಮಾಲೆ"ಯ ದೀಕ್ಷಾವಿಧಿ ಕ್ರಮ ಸ್ಥಲದಲ್ಲಿರುವ ಮಂತ್ರವನ್ನು ಸಹ ಇಲ್ಲಿ ಕೊಟ್ಟಿದೆ ನೋಡಿರಿ.

ಮಂತ್ರ: ಚಂದನಾಗರು ಕರ್ಪೂರ ತಮಾಲದಳ ಕುಂಕುಮಂ | ಉಶಿರಕೋಷ್ಟ
ಸಂಯುಕ್ತ ಶಿವ ಗಂಧಾಷ್ಟಕಂ ಸ್ಮೃತಂ || ಅಜಮಾನಸ್ತು ಸಿದ್ಧಾರ್ಥಂ ಅವ
ಧಾರ್ಯ ಯಥೈವಚ | ಅಷ್ಟಗಂಧ ಸಮಾಯುಕ್ತ ಪುಣ್ಯಪ್ರದ ಸಮುಸ್ಥಿತಂ ||

ಮೈಲಾರ ಬಸವಲಿಂಗ ಶರಣರ "ಲಿಂಗಪೂಜಾ ವಿಧಾನ" ದಲ್ಲಿರುವ ಮಂತ್ರಗಳನ್ನು ನೋಡಿರಿ.

ಮಂತ್ರ: ಮುಂದೆ ಬಹು ಫಲ ಪದಂಗಳ | ದಂಡುಗದ ಜೇರೆ ಕೀಳ್ಸರ ಕುಂದ್ವಾಲಂ |
ಎಂದೆನಿಪ ಇಷ್ಟಲಿಂಗಕ್ಕೆ ಗಂಧೋದಕದ ಸೌಖ್ಯಾನಂದಾಭಿಷೇಕ ||

ಮಂತ್ರ: ಕೋಷ್ಟ ಕರ್ಪೂರ ಜಾಪರ | ಶ್ರೇಷ್ಠಾ ಗುರು ಗಂಧ ಕಸ್ತೂರಿ ಬಾಳತ ಮಾಲ |
ಅಷ್ಟಗಂಧವನು ಶ್ರೀಕರ ದಿಷ್ಟ ಮಹಲಿಂಗ ಪಂಗಕ್ಕನು ಲೇಪಿಸುವೆಂ ||

ಶರಣರೂ ಕೂಡ ಗಂಧ ಧರಿಸುತ್ತಿದ್ದವರ ಬಗ್ಗೆ "ಬಸವ ಪುರಾಣ" ದಲ್ಲಿ ಸೌಂದರ ನಂಬಿಯಣ್ಣನ ಚರಿತ್ರೆಯನ್ನು ನೋಡಿರಿ.

ಹೀಗೆ ಗಂಧ-ಕುಂಕುಮಗಳನ್ನು ಧರಿಸಬೇಕೆಂದು ಹೇಳಿದ್ದರೂ ಇವು ನಿಷೇಧವೆಂದು ಅವರಿಗೆ ಯಾವ ಪುಣ್ಯಾತ್ಮನು ಹೇಳಿದನೋ ತಿಳಿಯದಾಗಿದೆ. ಮತ್ತು ಶ್ರೀ. ಉಮಾಮಣಿಯವರು "ಕುಂಕುಮ ಧಾರಣ"ವೆಂಬ ನಾಟಕವನ್ನು ಬರೆದದ್ದು ಬರೋಬರಿ ಇದೆ. ಕುಂಕುಮವನ್ನು ಭಸ್ಮದ ಕೆಳಗೆ ಸ್ತ್ರೀಯರು ಧರಿಸಲೇಬೇಕು. ಇವರಿಗೆ ಕುಂಕುಮ ಸೌಭಾಗ್ಯವತಿಯರೆಂಬ ನಾಮವು ಈ ಕುಂಕುಮದಿಂದಲೇ ಬಂದಿದೆ. ಸ್ತ್ರೀಯರಿಗೆ ಕುಂಕುಮವು ಸೌಭಾಗ್ಯ ಚಿನ್ಹಗಳಲ್ಲಿ ಮೊದಲನೆಯದು. ನಾರಿಯ ಜೀವನದ ಸುಖ ಸೌಭಾಗ್ಯ ಮತ್ತು ಆರೋಗ್ಯದ ಸಂದೇಶವನ್ನು ತರುತ್ತದೆ. ಈ ಎಲ್ಲ ಸೌಭಾಗ್ಯ ಚಿನ್ಹಗಳಲ್ಲಿ ಕುಂಕುಮಕ್ಕೆ ಪ್ರಥಮ ಸ್ಥಾನವನ್ನು ಕೊಡಲಾಗಿದೆ. ತಿರುಜ್ಞಾನದಯದ

ಕೆಂಪು ಹೇಗೆ ಫಲಭರಿತವಾಗಿರುತ್ತದೆಯೋ ಹಾಗೆ ನಾರಿಯು ಅರುಣೋದಯದ ಪ್ರತೀಕವೆಂಬಂತೆ ಕೆಂಪು ಬಣ್ಣದ ಕುಂಕುಮವನ್ನು ಧರಿಸಿಕೊಂಡು ತನ್ನ ಸುಖ ಸೌಭಾಗ್ಯಗಳ ಇಚ್ಛೆಯನ್ನು ಪ್ರಕಟಿಸುತ್ತಾಳೆ. ಆದಕಾರಣ ಸ್ತ್ರೀಯರಿಗೆ ಕುಂಕುಮ ಸೌಭಾಗ್ಯವತಿಯೆಂಬ ನಾಮ ಬಂದಿಗುತ್ತದೆ. ಕುಂಕುಮವು ಸ್ಫೂರ್ತಿ ದಾಯಕ, ಮಾನರಕ್ಷಕ. ಕೆಂಪುಬಣ್ಣವು ಅಪಾಯ (ಡೇಂಜರ್) ಸೂಚಕ ಚಿಹ್ನವದೆ. ಹಣೆಗಿದ್ದ ಕೆಂಪುಬಣ್ಣದ ಕುಂಕುಮ ನೋಡಿ ಯಾವ ವ್ಯಕ್ತಿಯೂ ಅವಳ ಮೇಲೆ ಕೆಟ್ಟದೃಷ್ಟಿಯನ್ನಿಡಲು ಸಾಹಸವಾಗಲಾರದು. ಈ ಕುಂಕುಮದ ಗುರುತು ಮರ್ಯಾದೆಯ ಒಂದು ಪರೀಕ್ಷೆ. ಇದು ಅಪಾಯ ಸೂಚಕ ಗುರುತೆಂದು ಸ್ತ್ರೀಯರು ಕುಂಕುಮ ಧರಿಸಲೇಬೇಕು. ಇದನ್ನು ಧರಿಸಬಾರದೆಂದು ಬರೆದಿರುವ ಪಿಶಾಚಿಯ ಬರಹಕ್ಕೆ ಯಾರೂ ಬೆಲೆ ಕೊಡಬಾರದಾಗಿ ವಿನಂತಿ. ಇನ್ನು ಲಿಂಗಕ್ಕೆ ಅಕ್ಷತೆ ಧರಿಸುವದೂ ನಿಷೇಧವಲ್ಲವೆಂಬುದನ್ನು ಕೆಳಗಿನ ಪದ್ಯ ಗಳನ್ನು ನೋಡಿರಿ.

ಪದ್ಯ: ಬ್ರಹ್ಮಂಗೆ ಸನ್ನಿಹಿತ ಶಂಕರಂ ಪೇಳ್ದಸಕ್ಷತೆಗಳು ಮ | ಭಿನ್ನವಾಂ ರಂಖದಂ ಪದೆ ಬಿಳಿದು ನಯಸಣ್ಣನುತ್ತುಮ ಪ್ರೀಹಿಜನಿತಂ || ಉನ್ನತದ ಮೌಕ್ತಿಕ ಸಮಾನ ವೆಸಲರ್ಪಿಸಲು ಇನ್ನೊಂದು ಬಗೆಯುಂಟಾ ದಾಡಿಮದ ಬೀಜಸಮ | ಪನ್ನಲಿಸೆವಸಕ್ಷತೆಯ ನರ್ಪಿಸಲು ಫಲವಧಿಕವೆಂದನಾ ಸರ್ವೇಶ್ವರಂ ||

ಪದ್ಯ: ಕ್ಷತವೆಂದೊಡಂ ಘಾಯವಾದಿ ಪಾಸಿಗಳಲಾ | ಸುತನೆಯದ ಪೊರ್ವರ್ಲೀಸದೆ ಸುಖದ ಸೀಯಲಿ | ಕ್ಷತೆನಾಮಾದುದಾ ಕುಶಪುಷ್ಪದೊಳು ಸಮರ್ಪಿಸಲೀಶ ಲೋಕದಲಿ || ಅತಿಸುಖದೊಳಿರ್ಪರ್ಕೈಶಿಲ ದರ್ಪಣೆಯ ಫಲೋ | ಸ್ವತಿಯ ಕೇಳ್ವೆ ರಕ್ತಪೀತಕ ಪಿಲಂ ಕೃಷ್ಣ | ವತಿಶುಭ್ರ ಪೀಶ್ವರಂಗರ್ಪಿಸಿದೊಡುತ್ತರೋ ತ್ತರ ಕೋಟಿ ಫಲವಪ್ಪುದು ||

ಪದ್ಯ: ಚಾರು ಬಸವಂ ಪರಪಿದಕ್ಕಿಯಂ ತಂದೊಡಾ | ನಾರಿಬಿಸುಡಿಸಿ ಮಂರಳಿ ತರಿಸಿ ಬಿಜಯಂಗಯ್ಸಿ | ಆ ರೇವಣಸಿದ್ಧ ಪೂಜಾತಿಥಿ ಪ್ರಕರದೊಡನೆ ಬಸವಾದಿ ಶರಣಾ || ರೋರಣಂ ಬರಲ ವರತಣು ಪಲಂದಾದ್ದುಕ್ಕಿ | ಪಾರಣ್ಣನೊಪ್ಪಿ ವನ ಹಂಗೆಯಾಯಕ್ಷತೆ ಸಾರಪೂಜೆಯು ನೆಸಗುತಿರ್ದ ನಂದಾದೀಕ್ಷೆ ಯಾರಾಧ್ಯ ಚಕ್ರವರ್ತಿ || ಕೃಷ್ಣಾಷ್ಟಮಿಯೊಳಾ ಚತುರ್ದಶಿಯೊಳಾ ದೊಡಮ | ಸುಷ್ಣ ಕರಶೇಖರಂಗಂ ಶಿವಸುತಾರೆಯಳ | ಗುಷ್ಣೀಷವಂದೆ ವಂದಿಸಿ ರಾತ್ರಿಯೊಳಗೆ ಕಣ್ಗೆಸೆವ ಕ್ಷತೆಗಳ ಮಾಡಿ || ಕಾಷ್ಠಗತಿಲ ವರ್ಪಿಸಿದವಂ ಮೃತ್ಯುವಿನ ಬಾಯ | ಪಾಷ್ಣಿಗಯಿಂದೊದೆದು ಮರ್ತ್ಯದೊಳು ಭೋಗದೊಳಿರ್ದು | ವಿಷ್ಣುಪದ ಮುಖ್ಯಮಂ ಜರೆವ ಸನ್ಮೋಚರಿಷ್ಣು ಸೆಸಸುವ ನೇಳ್ಗೆಯಂ ||

ಹೀಗೆ ಇಷ್ಟಲಿಂಗಕ್ಕೆ ಧರಿಸುವ ಅಕ್ಷತೆಗಳು ಅಭಿನ್ನವಾಗಿಯೂ ಶಂಖ ದಂತೆ ಬಿಳಿದಾಗಿಯೂ ನಯವಾದ ಸಣ್ಣಕ್ಕಿಯಿಂದ ಮುತ್ತಿನ ಸಮವಾಗಿ ಮಾಡಿದವುಗಳನ್ನು ಅಥವಾ ದಾಡಿಮ ಬೀಜ ಸಮವಂತೊಪ್ಪುವ ಅಕ್ಷತೆಯನರ್ಪಿಸಿದರೆ ಅಧಿಕ ಫಲವೆಂದೂ ಅವುಗಳನ್ನು ಕುಸುಪುಷ್ಪ ಸಹಿತ ಸಮರ್ಪಿಸಿದರೆ ಶಿವಲೋಕದಲ್ಲಿ ಸುಖದಿಂದಿರುವರೆಂದೂ "ಕ್ರಿಯಾಸಾರ"ದಲ್ಲಿ ಹೇಳಿರುವದು.

ಮಂತ್ರ: ಅಭಿನ್ನ ಶಂಖವಚ್ಛೈವ ಸುಸ್ನೇತ ವ್ರೀಹ ತಂಡುಲಂ । ಸ್ಮೃತಂಶಿಲಾರ್ಚನಾಯೋಗ್ಯಂ ನೆತರಂಚಿ ವರಾನನೆ ಗಂಧಾಕ್ಷತ ಸಮಾಯುಕ್ತಂ ಶಿವಮುಕ್ತೇಷ್ಟ ಕಾರಣಂ । ಸರ್ವವಿಘ್ನ ವಿನಿರ್ಮುಕ್ತಂ ಶಿವಲೋಕೆ ಮಹೀಯತೆ ॥

ಎಂಬ ಈ ಮಂತ್ರದಿಂದ ಶಿವಲಿಂಗಕ್ಕೆ ಅಕ್ಷತೆಯನ್ನು ಸಮರ್ಪಿಸುವದು ಯೋಗ್ಯವೆಂದು ಗುಬ್ಬಿಯ ಮಲ್ಲಣಾರ್ಯರು ರಚಿಸಿದ "ಗಣಭಾಷ್ಯ ರತ್ನಮಾಲೆ" ಯಲ್ಲಿ ಬರೆದಿರುವರು.

ಶ್ಲೋಕ: ಬಿಳಿಯತಿಲ ಸಿವಳ ತಂಡುಲ । ತಿಳಿಗೋದುಮೆ ಚಣಕವೊಡಕು ಮುದ್ಗಿನ ವಿದಳಂ । ಖಿಳಿತಮಾದಕ್ಷತೆಯು ಕರನಳಿನ ಸ್ಥಳದಿಷ್ಟಲಿಂಗದ ಪಣೆಗಾಂ ನೀಡುವೆಂ ॥

ಹೀಗೆ ಮೈಲಾರ ಬಸವಲಿಂಗ ಶರಣರೂ ಕೂಡ ತಮ್ಮ "ಲಿಂಗ ಪೂಜಾ ವಿಧಾನ"ದಲ್ಲಿ ಬರೆದಿರುವರು. ವೇದಾಗಮಶಾಸ್ತ್ರ ಪದ್ಧತಿ ಪ್ರಕಾರ ಮತಸ್ಥಾಪನಾಚಾರ್ಯರೂ ಮಹಾ ಸ್ವಾಮಿಗಳವರೂ ಅಕ್ಷತೆಗಳನ್ನು ಧರಿಸುತ್ತಾರೆ. ದ್ವಿತೀಯ ಶಂಭುವೆಂದು ಹೆಸರು ಪಡೆದ ಬಸವೇಶ್ವರನ ವಿವಾಹದಲ್ಲಿ ಪಂಚಾಚಾರ್ಯರು ಹಾಕಿದ ಅಕ್ಷತೆಗಳನ್ನು ಶರಣನಾದ ಮಾರಯ್ಯನು ಆರಿಸಿದ್ದರಿಂದ ಆ ಶರಣನಿಗೆ ಆದಕ್ಕಿ ಮಾರಯ್ಯನೆಂದು ಹೆಸರು ಬಂದಿದೆಯೆಂದು ಪುರಾಣ ಸಾರುತ್ತದೆ. ವಧು-ವರರಿಗೆ ಪೂರ್ವ ಪದ್ಧತಿ ಪ್ರಕಾರ ಅಕ್ಷತೆಯನ್ನು ಶಾಸ್ತ್ರ ಪದ್ಧತಿಯಂತೆ ಹಾಕಲೇಬೇಕು ಬಿಲ್ವಪತ್ರಿ ಹಾಕಿದರೆ ಆಯುಷ್ಯ-ಅಭಿವೃದ್ಧಿಗಳಿಗೆ ಹಾನಿ ತಟ್ಟುವದೆಂದು ಪೂರ್ವಜರು ನಿರ್ಣಯಿಸಿ, ಅಕ್ಷತೆ ಹಾಕುವದು ಬಳಕೆಯಲ್ಲಿ ತಂದಿದ್ದಾರೆ ತಿಳಿಯಿರಿ.

ಆದರೆ ಅಕ್ಷತೆಯ ಮಹತ್ವವನ್ನರಿಯದ ಗದಗಿನ ಶರಣ ಸೇವಾ ಸಂಘದವರು— ಶಾಸ್ತ್ರಪದ್ಧತಿ ಪ್ರಕಾರ ಅಕ್ಷತೆ ಧರಿಸುವದು ನಿಷೇಧವೆಂದೂ ಇದು ಪ್ರಸಾದವಾಗುವದೆಂದೂ ಅನ್ನುವರು ಹೀಗಿಷ್ಟು ಮಾತ್ರಕ್ಕೆ ಇಂಥ ಪ್ರಸಾದ

ವನ್ನು ತಿಂದು ನರಕವಾಗುವದೆಂದು ತಿಳಿದ ಈ ಸಂಘದವರು ಅಕ್ಕಿಯನ್ನುಣದೆ ಗಡ್ಡೆ–ಗೆಣಸು ತಿಂದು ಜೀವಿಸಬಹುದಲ್ಲವೇ ?

## ರುದ್ರಾಭಿಷೇಕ ನಿಷೇಧವೆಂಬ ಬಗ್ಗೆ:

ವೀರಶೈವರಿಗೆ ರುದ್ರಾಭಿಷೇಕ ನಿಷೇಧವಾಗಿದ್ದರೆ "ವೀರಶೈವಾಮೃತ ಮಹಾ ಪುರಾಣ"ದಲ್ಲಿಯ ೭ನೆಯ ಖಾಂಡ, ೯ನೆಯ ಸಂಧಿಯಲ್ಲಿಯ ಶ್ಲೋಕ ಮತ್ತು ಮೈಲಾರ ಬಸವಲಿಂಗ ಶರಣರು ಬರೆದ "ಲಿಂಗಪೂಜಾ ವಿಧಾನ"ದಲ್ಲಿಯ ಶ್ಲೋಕವನ್ನೂ ಕೊಟ್ಟಿದೆ ನೋಡಿರಿ.

ಶ್ಲೋಕ: ವೀರಶೈವ ಷಟ್‌ಸ್ಥಲ ಮಾರ್ಗಿ ಸದ್ಭಾವ । ಸದನ ಸುವಿರಕ್ತ ವ್ರತಾಚಾರ ಚಿತ್‌ಕ್ರಿಯಾ । ಪ್ರದಹಲಗಿಯಾಚಾರ್ಯರ್ ನಖಿಳ ಮಾಹೇಶ್ವರ ಹಿತಾರ್ಥದಿಂ ಕೇಳ್ವತಂನಾ । ಪದಪದ್ಮ ಮಧುಕರಂ ಕೆಂಚಿ ವೀರಾಖ್ಯಂಗೆ ಮುದದಿ ಪೇಳ್ದೀ ವೀರಶೈವಾ । ಮೃತದೊಳಗಾದುದು ಸುರುದ್ರಾಭಿಷೇಕಕ್ಕಾರು ಕಾಂಡದಿಂ ಮೇಲೆಯೊಂಬತ್ತು ಸಂಧಿ ॥

ಶ್ಲೋಕ: ಕ್ಷುದ್ರನರಹರಿಯು ಸಿರ್ದಶ್ರೀ । ರುದ್ರ ವನತಿಗಳೆಮ ಬಳಿಕಿಹ ಪರ ಸೌಖ್ಯ ಸಮುದ್ರ ಸುಮಹಲಿಂಗಕ್ಕೆ ಭೂ । ರುದ್ರನಾಗಿಯೆ ಮಾಳ್ಪದು ರುದ್ರಾಭಿಷೇಕಂ ॥

ವೀರಶೈವ ಪದ್ಧತಿ ಪ್ರಕಾರ ಲಿಂಗ ಪೂಜಾ ರುದ್ರಾಭಿಷೇಕ ಮಾಡುವದು, ಗಂಧ, ಕುಂಕುಮ, ಅಕ್ಷತೆ ಧರಿಸುವದು ವೇದವೇದಾಂತ ಸಿದ್ಧಾಂತಾಗಮ ಸ್ಮೃತಿ ಇತಿಹಾಸಗಳ ಪ್ರಮಾಣಗಳಿಂದ ಸಕಲ ವಿದ್ವಜ್ಜನರು ಸಮ್ಮತವಾಗಿ ಹೇಳಿರುವದನ್ನು ಬಿಟ್ಟು ಇವು ನಿಷೇಧವೆಂದು ಮೈಲಾರಲಿಂಗನ ಹೆಸರು ಹೇಳಿ ಹೊಟ್ಟೆ ತುಂಬಿಕೊಳ್ಳುವ ಗೋರಪ್ಪಗಳಂತೆ ಶರಣರ ಸಂಘವೆಂಬ ಪವಿತ್ರನಾಮದ ಹೆಸರಿನಿಂದ ಹೊಟ್ಟೆ ತುಂಬಿಕೊಳ್ಳುವ ತಾಮಸಭಕ್ತರು ಕೆಲವು ಜ್ಞಾನಸ್ಥಲ ವಚನಗಳನ್ನು ಕಲ್ಪಿಸಿಕೊಂಡು ಗುರುನಿಂದೆ ಜಂಗಮನಿಂದೆ ಮಾಡಿ ಅನೃತಾದಿ ದೋಷಗಳಿಗೆ ಹೆದರದೆ ಅನಿಷ್ಟ ಹಾಗು ಸಮಾಜಘಾತಕ ಮಾಡುವದನ್ನು ಪ್ರತಿಬಂಧಿಸುವದಕ್ಕಾಗಿ ವೀರಶೈವ ಧರ್ಮದಲ್ಲಿ ಈ ಸ್ವಾರ್ಥಿಗಳ ಕೈವಾಡದಿಂದುಂಟಾದ ಕೊಳೆಯನ್ನು ದೂರಗೈದು, ಪೂರ್ವದಲ್ಲಿ ಪಂಚಾಚಾರ್ಯರ ಕಾಲದಂತೆ ವರ್ಣಾಶ್ರಮದ ಜಗನ್ಮಾನ್ಯ ತತ್ವಗಳಿಂದ ಪುನರಪಿ ಬೆಳಗಲೆಂದು ನಾವು ಯತ್ನಿಸಲಾಗಿದೆ.

"ಧರ್ಮೋಽವವಹತೋಽಹಂತಿ ಧರ್ಮೋ ರಕ್ಷತಿ" ಎಂಬಂತೆ ನಾವು ಧರ್ಮವನ್ನು ಕಾಪಾಡಿದರೆ ಅದು ನಮ್ಮನ್ನು ಕಾಪಾಡುವದು. ಅದನ್ನು ನಾಶ ಮಾಡಿ

ವರೆ ಅಂದರೆ ಧರ್ಮ ವಿರುದ್ಧ ಆಚರಣೆಯುಳ್ಳವರಾದರೆ ಅದು ನಮ್ಮನ್ನು ಅಧಃ ಪಾತಕ್ಕೆ ತಳ್ಳುವದು. ಈ ಕಾರಣದಿಂದಲಾದರೂ ಧರ್ಮವನ್ನು ಎಂದೆಂದಿಗೂ ಮೀರಬಾರದು. "ಧರ್ಮೇಣ ಹೀನಃ ಪಶುಭಿಸ್ಸಮಾನಃ" ಎಂಬಂತೆ ಧರ್ಮ ಭ್ರಷ್ಟನಾದವನು ಕೋಡು ಬಾಲಗಳಿಲ್ಲದ ದ್ವಿಪಾದ ಪಶುವೆನಿಸುವನು.

ಶ್ಲೋಕ: ಬಹುನಿಷ್ಕಪಟದ್ರೋಹಿ ಬಹುಧಾನ್ಯೋಪಘಾತಕಃ ।
ರಂಧ್ರಾನ್ವೇಷೀಚ ಸರ್ವತ್ರ ದೂಷಕೋ ಮೂಷಕೋಯಥಾ ॥

ಹೀಗೆ ದೂಷಕರಾದ ಶರಣರ ಸಂಘದವರು ಮೂಷಕರಂತಿರುವರು. ಬಹುನಿಷ್ಕಪಟದ್ರೋಹಿ, ಬಹುಧಾನ್ಯೋಪಘಾತಕಃ, ಸರ್ವತ್ರ ರಂಧ್ರಾನ್ವೇಷಿ ಎಂಬ ಮೂರು ವಿಶೇಷಗುಣಗಳು ಈ ದೂಷಕರಿಗೂ ಮೂಷಕನಿಗೂ ಸರಿ ಹೋಗುವದರಿಂದ ಮೂಷಕವು (ಇಲಿ) ಬಹುನಿಷ್ಕಪಟ ಬಹುಬೆಲೆಯುಳ್ಳ ಪಟ–ವಸ್ತ್ರಕ್ಕೆ ದ್ರೋಹಮಾಡುವದು. ಅಂದರೆ ಅಮೂಲ್ಯವಾದ ವಸ್ತ್ರವನ್ನು ಕಡಿದು ಹಾಳು ಮಾಡುವದು. ಬಹುಧಾನ್ಯೋಪಘಾತಕಃ– ಧಾನ್ಯವನ್ನು ನಾಶಮಾಡುವದು. ಸರ್ವತ್ರ ರಂಧ್ರಾನ್ವೇಷಿ– ಎಲ್ಲಕಡೆಗೂ ಬಿಲವನ್ನು ಮಾಡುವದು. ಇವರಂತೆ ಈ ದೂಷಕರು ಬಹು ನಿಷ್ಕಪಟದ್ರೋಹಿಗಳು. ಸ್ವಲ್ಪವೂ ಕಪಟವಿಲ್ಲದ ಗುಡ್ಡದ ಮಲ್ಲಾಪುರದ ಮೂಕಪ್ಪಸ್ವಾಮಿಗಳನ್ನು, ಶ್ರೀ. ಮ. ನಿ. ಜಗದ್ಗುರು ಮುರುಘರಾಜೇಂದ್ರ ಸ್ವಾಮಿಗಳನ್ನು, ಹುಬ್ಬಳ್ಳಿ ಮೂರುಸಾವಿರ ಮಠದ ಸ್ವಾಮಿಗಳನ್ನು, ಶಿವಯೋಗ ಮಂದಿರ ಸ್ಥಾಪನಾಕರ್ತರಾದ ಹಾನಗಲ್ಲ ಶ್ರೀಗಳವರನ್ನು, ಏಳುನೂರಾ ಎಪ್ಪತ್ತು ಮಂಟಪ ಪೂಜಾ ಮಾಡಿಸಿ, ವಿಜಾಪುರದಲ್ಲಿ ಹಾಯಸ್ಕೂಲನ್ನು ಸ್ಥಾಪಿಸಿದ ಬಂಥನಾಳ ಶಿವಯೋಗಿಗಳನ್ನು, ಮೃತ್ಯುಂಜಯ ಮಹಾಸ್ವಾಮಿಗಳನ್ನು ಇತ್ಯಾದಿ ಗುರುಜಂಗಮರನ್ನು ಪಾಪಾತಿರೇಕದಿಂದ ಹೊಲಸಾದ ಬಾಯಿಂದ ನಿಂದೆಯನ್ನು ಮಾಡಿ, ದುರ್ಗತಿಗೀಡಾಗ ಹತ್ತಿದೆ. ಸ್ವಲ್ಪವೂ ಕಪಟವಿಲ್ಲದ ಜನರಿಗೆ ದ್ರೋಹ ಮಾಡುವದು, ಬಹು ಪ್ರಕಾರವಾಗಿ ಅನ್ಯರಿಗೆ ಅಪಘಾತವನ್ನು ಮಾಡುವದು, ಎಲ್ಲರಲ್ಲಿಯೂ ಅಥವಾ ಎಲ್ಲ ವಿಷಯಗಳಲ್ಲಿಯೂ ಕೈಹಾಕಿ ಛೀ ಮಾಡಿಸಿಕೊಳ್ಳುವದು ಇವರ ಹುಟ್ಟು ಗುಣವಾಗಿದೆ. ಕಾರಣ ಶರಣರ ಹೆಸರು ಹೇಳಿ ಹೊಟ್ಟೆ ತುಂಬಿಕೊಳ್ಳುವವರ ಬರಹಕ್ಕೆ ಬೆಲೆಕೊಡದೆ ಮೊದಲಿನಂತೆ ನಡೆಯುವದು ಲೇಸು.

**ಪ್ರಶ್ನೆ:** ವೀರಶೈವರು ಮೂರ್ತಿಪೂಜೆ ವಿರೋಧವನ್ನು ಆದಿಯಿಂದಲೂ

ಮಾಡುವರಾದರೂ ಈಗೀಗ ಇವರು ಅಂಧಾನುಕರಣದಿಂದ ಮೂರ್ತಿಸ್ಥಾಪಕರೂ ಪೂಜಕರೂ ಆಗುತ್ತ ಗುಡಿಗುಂಡಾರಗಳನ್ನು ಸ್ಥಾಪಿಸುತ್ತಿರುವದನ್ನು ಕಂಡು ಬಲ್ಲವರು ನೊಂದುಕೊಳ್ಳದಿರರು. ಹೀಗೆಂದು ಬರೆದಿರುವರು.

**ಉತ್ತರ:**

ಶ್ಲೋಕ: ದ್ರಾಕ್ಷಾರಾಮೇರಾಮನಾಥಲಿಂಗೆ ಯುಗ ಚತುಷ್ಟಯೇ। ಏಕೋರಾಮಸ್ಯ
ಜನನಂ ವಾಸಸ್ತು ಹಿಮಾಲಯೇ। ಸುಧಾಕುಂಡಾಖ್ಯ ಸುಕ್ಷೇತ್ರಲಿಂಗೇ
ಶ್ರೀ ಮಲ್ಲಿಕಾರ್ಜುನೇ। ಜನನಂ ಪಂಡಿತಾರ್ಯಸ್ಯ ನಿವಾಸಶ್ಶ್ರೀಗಿರೌಶಿವೆ।
ತಥಾರೇವಣಸಿದ್ಧಸ್ಯ ಕೊಲ್ಲಿಪಾಕಿಪುರೋತ್ತಮೆ॥ ಸೋಮೇಶಲಿಂಗೇ ಜನನಂ
ವಾಸಃ ಕದಳಿಪುರೆ। ತದ್ವನ್ಮರುಳ ಸಿದ್ಧಸ್ಯ ವಟಕ್ಷೇತ್ರೇ ಮಹತ್ತರೆ॥
ಸಿದ್ಧೇಶಲಿಂಗೇ ಜನನಂ ಸ್ಥಾನಂ ಉಜ್ಜನೀಪುರೆ। ಕಾಶ್ಯಾಂ ವಿಶ್ವೇಶ್ವರಲಿಂಗೇ
ವಿಶ್ವಾರಾಧ್ಯಸ್ಯ ಸಂಭವಾಃ॥ ಸ್ಥಾನಂ ಶ್ರೀ ಕಾಶಿ ಕ್ಷೇತ್ರೇ ಶೃಣು ಪಾರ್ವತಿ
ಸಾದರಂ। ಕೃತಾದ್ಯುಗ ಚತುಷ್ಕೇತೇ ಪಂಚಾಚಾರ್ಯ ಯಥಾವಿಧಿ॥

ಹೀಗೆ ಆಗಮದಲ್ಲಿ ವೀರಶೈವ ಮತ ಸ್ಥಾಪನಾಚಾರ್ಯರು ಉತ್ಪತ್ತಿ ಸ್ಥಾವರ ಲಿಂಗಗಳಲ್ಲಿದ್ದು ಕೇದಾರೇಶ್ವರ ಪುಣ್ಯಕ್ಷೇತ್ರವು ಹಿಮವತ್ ಕೇದಾರ ಸಿಂಹಾಸನದವರ ವಶದಲ್ಲಿರುತ್ತದೆ. ಇದರ ಪೂಜೆಯು ಈಗ್ಯೂ ವೀರಶೈವರೇ ಮಾಡುತ್ತಾರೆ. ಶ್ರೀಶೈಲ ಮಲ್ಲಿಕಾರ್ಜುನ ಸ್ಥಾವರಲಿಂಗ, ಪರಳಿ ವೈದ್ಯನಾಥ ಲಿಂಗಗಳ ಪೂಜೆಯು ವೀರಶೈವರಿಂದಲೇ ನಡೆಯುತ್ತದೆ. ಕಾಶೀ ವಿಶ್ವೇಶ್ವರ ಲಿಂಗ ದೇವಾಲಯವು ಇವರ ವಶದಲ್ಲಿತ್ತು. ಆದರೆ ಔರಂಗಜೇಬನ ಕಾಲದಲ್ಲಿ ನಷ್ಟವಾಗಿ ಹೋದದ್ದರಿಂದ ಇವರ ಕೈತಪ್ಪಿ ಹೋಗಲಿಕ್ಕೆ ಕಾರಣವಾಯಿತು. ಕಾಲಕಾಲೇಶ್ವರ ಲಿಂಗ ದೇವಸ್ಥಾನವು ಇವರ ವಶದಲ್ಲಿರುತ್ತದೆ. ಉದಾ: ಒಂದೇ ಕುಟುಂಬದೊಳಗಿನ ಸೊಸೆಯು ತನ್ನ ಅತ್ತೆ-ಮಾವಂದಿರರಿಗೂ ಭಾವ-ಮೈದುನರಿಗೂ ಅತ್ತಿಗೆ-ನಾದಿನಿಯರಿಗೂ ಮಾನ ಕೊಡುತ್ತಾಳೆ. ಅವರ ಆಜ್ಞೆಯನ್ನೂ ಉಲ್ಲಂಘಿಸುವದಿಲ್ಲ. ಅವರನ್ನು ತಿರಸ್ಕಾರ ಮಾಡುವದಿಲ್ಲ. ಆದರೂ ಇವರೆಲ್ಲರಕ್ಕಿಂತಲೂ ಗಂಡನ ಮೇಲೆಯೇ ಅವಳ ಪ್ರೇಮ ಅಧಿಕವಾಗಿರುತ್ತದೆ. ಹೀಗೆ ವೀರಶೈವರು ಇಷ್ಟಲಿಂಗದ ಲಿಂಗಾಂಗ ಸಾಮರಸ್ಯದಲ್ಲಿ ಇವರು ಪ್ರೇಮ ಇಟ್ಟುಕೊಂಡು ಉಳಿದ ಸ್ಥಾವರಲಿಂಗ, ವೀರಭದ್ರ, ವಿನಾಯಕ, ಷಣ್ಮುಖ ಮುಂತಾದ ದೇವರ ಮೇಲೆ "ಶರಣಸತಿ, ಲಿಂಗಪತಿ" ಎಂಬ ಬಿರುದನ್ನು ಪಡೆದ ವೀರಶೈವರು ಭಾವ-ಮೈದುನರಂತೆ ತಿಳಿದು ಸ್ಥಾವರಲಿಂಗ ಪುಣ್ಯಕ್ಷೇತ್ರಗಳನ್ನು

ತಮ್ಮ ವಶದಲ್ಲಿಟ್ಟುಕೊಂಡು ಬಂದಿದ್ದಾರೆ. ವೀರಶೈವರು ಧರಿಸುವ ಇಷ್ಟಲಿಂಗದಲ್ಲಿ ಭಕ್ತಿಯನ್ನು ಹೆಚ್ಚಿಸುವದರ ಸಲುವಾಗಿ ಕೆಲ ಶಿವಶರಣರು ವಚನಗಳಲ್ಲಿ ಸ್ಥಾವರ ಲಿಂಗಪೂಜಾ ನಿಷೇಧಿಸಲ್ಪಟ್ಟಿರುವದು.

ಗುರುಸ್ಥಲ ಸಾರಂಗಪಾಣಿ ಮಠಾಧಿಕಾರಿಯಾದ ಜಾತವೇದ ಮುನಿಸ್ವಾಮಿಗಳು ಶ್ರೀ ಬಸವೇಶ್ವರನಿಗೆ ಲಿಂಗಧಾರಣ ಮಾಡಿದ್ದರಿಂದ ಅವರಲ್ಲಿ ಭಕ್ತಿಯನ್ನಿಟ್ಟುಕೊಂಡು ಅವರಿಂದಲೇ ವಿದ್ಯಾಭ್ಯಾಸ ಮಾಡಬೇಕೆಂದು ಬಾಗೇವಾಡಿಯನ್ನು ಬಿಟ್ಟು ಕಪ್ಪಡಿ ಸಂಗಮನಾಥದಲ್ಲಿರುವ ಜಾತವೇದ ಮುನಿಗಳ ಮಠಕ್ಕೆ ಬಂದು, ನಮಸ್ಕರಿಸಿ, ಅವರ ಅಪ್ಪಣೆ ಪಡೆದು ಸಂಗಮನಾಥನ ಗುಡಿಗೆ ಬರಲು, ಅಲ್ಲಿಯ ಶೈವ ಪೂಜಾರಿಗಳು ಇವನನ್ನು ಸಂಗಮನಾಥನ ದರ್ಶನಕ್ಕೆ ಒಳಗೆ ಬಿಡದಿರಲು, ಬಸವೇಶ್ವರನು ನೊಂದುಕೊಂಡು ಶ್ರೀ ಸಂಗಮನಾಥನನ್ನು ಒಳ್ಳೇ ಭಕ್ತಿಯಿಂದ:

ವಚನ: ನಿತ್ಯ ನಿರ್ಮಳನೆ ನಿಃಕಳನೆ ಕೂಡಲಸಂಗ। ನಿತ್ಯ ನಿರ್ಭಯನೆ ನಿರುಪಮನೆ ಕೂಡಲಸಂಗ। ಹೊಗಳ್ವ ವೇದಾದಿ ಗತಿಗೂಢ ಕೂಡಲಸಂಗ। ಸೊಗಸುವ ಘನ ವೃಷಭಾರೂಢ ಕೂಡಲಸಂಗ। ಎನ್ನಮನದಕ್ಕರದೊಳು ಕೂಡು ಕೂಡಲಸಂಗ। ಎನ್ನಕಣ್ಣೊಳಗೆ ಪರಿದಾಡು ಕೂಡಲಸಂಗ। ಎನ್ನಮನದೊಳಗೆ ಕುಣಿದಾಡು ಕೂಡಲಸಂಗ ॥

ಹೀಗೆ ಬೇಡಿಕೊಳ್ಳಲು ಸಂಗಮನಾಥನು ಇವನ ಭಕ್ತಿಗೆ ಮೆಚ್ಚಿ, ಒಂದು ಘಟಸರ್ಪವಾಗಿ ಆ ಶೈವ ಪೂಜಾರಿಯನ್ನು ಬೆನ್ನಹತ್ತಲು, ಪೂಜಾರಿ ಅಂಜಿ ಬಸವೇಶ್ವರನನ್ನು ಬೇಡಿಕೊಂಡನೆಂದೂ, ಆಮೇಲೆ ಸಂಗಮನಾಥನ ಪೂಜೆಯನ್ನು ವೀರಶೈವರೇ ಮಾಡಲೆಂದು ಅಲ್ಲಿಯ ಜಂಗಮರಿಗೆ ಒಪ್ಪಿಸಿದನೆಂದೂ ಪುರಾಣವು ಹೇಳುತ್ತಿದೆ. ಆ ಮೇಲೆ ಬಸವೇಶ್ವರನು ಸಂಗಮನಾಥನ ಸೇವೆಯಲ್ಲಿ ಹಗಲಿರುಳು ನಿರತನಾಗಿ ಹೂ, ಪತ್ರೆ, ಗಂಧ, ಅಕ್ಷತೆ ಮುಂತಾದವುಗಳನ್ನು ತಂದು:

ವಚನ: ಸುತಶೀತಂಗಳಂ ಪೊಂಗಳಸದೊಳು ತೀವಿ। ಅತಿಶಯಾನಂದಾಶ್ರುವಂ ಕಣ್ಗಳೊಳು ತೀವಿ। ಕೊಂಡಾಡಿ ಕೊಂಡಾಡಿ ಮಜ್ಜನಕ್ಕೆರೆವುತಂ। ಮುಂಡಾಡಿ ಮುಂಡಾಡಿ ನೊಸಲೊಳಚ್ಚೊತ್ತುತಂ। ಚಂದ್ರಚೂಡಂಗೆ ಸಿರಿಗಂಧವನಲಂಕರಿಸಿ। ಸಾಂದ್ರಸೌರಭ್ಯಮಯ ಪುಷ್ಪದಿಂ ಸಿಂಗರಿಸಿ।

ಪೂಜೆಯಂ ನೋಡಿ ಮೆಚ್ಚುವೆ ಪೂಜೆಯಂ ಮಾಡಿ । ಓಜೆಗೆಟ್ಟಿರುಹು
ಗೆಟ್ಟತಿಲಲ್ಲಿಯಂ ಮಾಡಿ । ಸಯುನಂಗಳೊಳು ಪೂಜೆ ಬರದಂತೆ
ನೋಡುತ್ತಂ । ಭಯಭಕ್ತಿಯಂ ಪೂಜೆ ಮೆರೆವಂತೆ ಮಾಡುತಂ ॥

ಹೀಗೆ ಪೂಜೆಯನ್ನು ಮಾಡುತ್ತ ಸದಾ ಸಂಗಮನಾಥನ ಧ್ಯಾನಮಾಡುತ್ತ, ಜಾತವೇದ ಮುನಿಯ ಹತ್ತರ ಇರುತ್ತಿದ್ದನೆಂದು ಅವನ ಚರಿತ್ರ ಹೇಳುತ್ತಿದೆ.

ವಚನ: ಹೊತ್ತಾರೆಯೆದ್ದು ಲಿಂಗದೇವನ ದೃಷ್ಟಿವಾರೆ ನೋಡದವನ ಸಂಸಾರವೇನವನ । ನಡಿಪಣನ ಸಂಸಾರವೇನವನ ಬಾಳುವೆಣನ ಬೀಳುವೆಣನ ಸಂಸಾರವೇನವನ । ಕೂಡಲ ಸಂಗಮದೇವಾ । ನಿಮ್ಮನ್ನು ಮುಟ್ಟಿ ನೋಡಿ ನೆನೆದು ಪೂಜಿಸಿದವನ ಬವಕೇನವನ ॥

ಹೀಗೆ ಬಸವೇಶ್ವರನೇ ಸ್ಥಾವರ ಲಿಂಗದಲ್ಲಿ ಭಕ್ತಿಯನ್ನಿಟ್ಟು ಪೂಜಿಸಿ, ಗುರುಲಿಂಗಜಂಗಮರನ್ನು ಸೇವೆ ಮಾಡಿದನೆಂದು ಅವನ ವಚನಗಳು ಹೇಳುತ್ತಿವೆ. ಪ್ರತಿಯೊಂದು ವಚನದಲ್ಲಿ ಕೂಡಲ ಸಂಗಮನೆಂಬ ಅಂಕಿತವದೆ. ಸಂಗಮೇಶ್ವರನು ಆ ಮಹಾತ್ಮನಿಗೆ ಪ್ರತ್ಯಕ್ಷನಾಗಿ "ಅಂಜದಿರಂಜದಿರ್ ಮಗನೆ ಜಪಮಾಲೆಯಲ್ಲಿ ಹೊದ್ದಲೀಯದೆ ಸಲಹಿದಪೆಂ ನೆಲಂ ಮೆಚ್ಚೆ ಮೆರೆದಿಪಂ" ಎಂದು ಆಶೀರ್ವದಿಸಿದನೆಂದು ಹರೀಶ್ವರ ಮಹಾಕವಿಯು ತನ್ನ "ಬಸವರಾಜದೇವರ ರಗಳೆ" ಎಂಬ ಕಾವ್ಯದಲ್ಲಿ ಹೇಳಿದ್ದಾನೆ.

ವಚನ: ಕೊಡುವ ಲಿಂಗವ ಬೇಡಿಕೊಳ್ಳಲರಿಯದೆ ಮಾನವರ ನಾಶಮಾಡಿ ಕೆಡಬೇಡ ಕೇಳಿರಣ್ಣಾ । ಪುರಾತನರು ಗುರುಲಿಂಗಜಂಗಮ ನರ್ಚಿಸಿ ದಾಸೋಹ ಮಾಡಿ ಕೇವಲ ವಿಶ್ವಾಸದಿಂದ ಲಿಂಗವನೆ ಬೇಡಿ ಲಿಂಗದಲಿ ವರವ ಪಡೆದುದಕ್ಕೆ ದೃಷ್ಟವ ನೋಡಿರೆ । ಅದು ಎಂತೆಂದೊಡೆ ಲಿಂಗವು ಮಾರ್ಕಂಡೆಯ ಮಳಿಯ ರಾಜಂಗೆ ಆಯುಷ್ಯವ ಕೊಟ್ಟ ನೋಡಿರೆ । ಸುರಗಿ ಚವುಡಯ್ಯ ಬಸವರಾಜದೇವರು ಹೋದ ಪ್ರಾಣಂಗಳ ಬೇಡಿದೊಡೆ ಕೊಟ್ಟ ನೋಡಿರೆ । ಇನ್ನು ಲಿಂಗವು ಭಾಷೆಯ ಕೊಟ್ಟದ್ದಕ್ಕೆ ದೃಷ್ಟವ ನೋಡಿರೆ । ಚೇಳಂಗೆ ಹೊನ್ನು ಮಳೆಯ ಕರಿಸಿದ ದಾಸಂಗೆ ತವನಿಧಿಯ ಕೊಟ್ಟ ದೇವದಾನವ ಮಾನವರಿಗೆಯೂ । ಅವರವರು ಬೇಡಿದ ಪದಂಗಳ ಬೇಡಿದರೆ ಕೊಡುವಂತಹ ಮಹಾದಾನಿಯನೆ ಬೇಡಿಕೊಳ್ಳಿರೆ । ಅನಾಥನಾಥನನು ಅನಾಥ ಬಂಧುವನು ಕರುಣಾಕರನನು

ವರಮೂರ್ತಿಯೆನು ದಾನಗುಣ ಶೀಲನನು। ಭಕ್ತದೇಹಿಕ ಕಾಮ
ಧೇನುವನು ಭಕ್ತದೇಹಿಕ ಕಲ್ಪವೃಕ್ಷವನು ಬೇಡಿಕೊಳ್ಳಿರೆ। ನಮ್ಮ
ಗುರುಲಿಂಗ ಸಿದ್ಧಿ ಪ್ರಿಯ ವಿಶ್ವೇಶ್ವರನನು॥

ಹೀಗೆ ಬಸವಾದಿ ಪ್ರಮಥರು ಸ್ಥಾವರ ಲಿಂಗದಲ್ಲಿ ಭಕ್ತಿಯನ್ನಿಟ್ಟು ಪೂಜಿಸಿ ವರಗಳನ್ನು ಪಡೆದರೆಂದು ಅವರ ಚರಿತ್ರಗಳು ಹೇಳುತ್ತವೆ. ವೀರಶೈವರು ಜೈನರ ಕೂಡ ವಾಗ್ವಾದ ಮಾಡಿ ಜಯಿಸಿ, ಅವರ ಬಸದಿಯಲ್ಲಿ ಕೆಲವರು ಶಿವ ಲಿಂಗವನ್ನು, ಕೆಲವರು ವೀರಭದ್ರನನ್ನು, ಕೆಲವರು ನಂದಿ ಮೂರ್ತಿಯನ್ನು ಸ್ಥಾಪಿಸಿದರು. ಪುಲಿಗೆರಿ ಅಂದರೆ ಲಕ್ಷ್ಮೇಶ್ವರದ ಸುರಹೊನ್ನಿ ಬಸದಿಯಲ್ಲಿ ಶಿವಲಿಂಗ ಸ್ಥಾಪಿಸಿದ್ದು, ಮತ್ತು ಸೌರಾಷ್ಟ್ರದ ಸೋಮೇಶ್ವರ ಲಿಂಗವನ್ನು ತಂದು ಅದೇ ಊರಲ್ಲಿ ಸ್ಥಾಪಿಸಿದನೆಂದು ರಾಘವಾಂಕನು ಬರೆದ ಆದಯ್ಯನ ಪುರಾಣ ಹೇಳುತ್ತದೆ. ಮತ್ತು ಉಳವಿಯ ಚನ್ನಬಸವೇಶ್ವರನ ಮೂರ್ತಿ, ಕಲಬುರಗಿಯ ಶರಣ ಬಸವೇಶ್ವರನ ಮೂರ್ತಿ, ಕೊಟ್ಟೂರ ಬಸವೇಶ್ವರನ ಮಠದಲ್ಲಿ ಸ್ಥಾಪಿಸಿದ ಗದ್ದಿಗೆ, ಎಡೆಯೂರ ತೋಂಟದ ಸಿದ್ಧಲಿಂಗೇಶ್ವರ ಮಠದ ಗದ್ದಿಗೆ, ಗದಗಿನ ತೋಂಟದ ಸ್ವಾಮಿಗಳ ಮಠದಲ್ಲಿ ಶ್ರೀಕರ ಬಸವೇಶ್ವರನ ಗದ್ದಿಗೆಗಳು ಸ್ಥಾವರ ವಲ್ಲವೇ ?

ವಚನ: ಗುರು ತನ್ನ ವಿನೋದಕ್ಕೆ ಸ್ಥಾವರನಾದ। ಗುರು ತನ್ನ ವಿನೋದಕ್ಕೆ
ಲಿಂಗವಾದ। ಗುರು ತನ್ನ ವಿನೋದಕ್ಕೆ ಜಂಗಮನಾದ। ಗುರು ತನ್ನ
ವಿನೋದಕ್ಕೆ ಪ್ರಸಾದವಾದ। ಗುರು ತನ್ನ ವಿನೋದಕ್ಕೆ ಗುರುವಾದ।
ಕೂಡಲಸಂಗಯ್ಯನಲ್ಲಿ ಏಕಾರ್ಥವಾದ ಗುರು॥

ಹೀಗೆ ಬಸವಾದಿ ಪ್ರಮಥರು ಸ್ಥಾವರಕ್ಕೆ ಮಹತ್ವ ಕೊಡುವ ಗುಟ್ಟೇನು ಬಲ್ಲಿರಿಯಾ ? ಕೋಗಿಲೆಯಿಂದ ವಸಂತಾಗಮದ ಬೋಧೆಯಾಗುವಂತೆ ಒಂದು ವಸ್ತುವಿನಿಂದ ಮತ್ತೊಂದಕ್ಕೆ ಗುರುತಾಗುವದು. ಉಷಃಕಾಲವು ಸೂರ್ಯೋ ದಯವನ್ನು ಸೂಚಿಸುವಂತೆಯೂ ಸ್ಥಾವರಲಿಂಗದಿಂದ ಇಷ್ಟಲಿಂಗ ನೆನಪಾಗು ತ್ತದೆ. ಕಾಣುವದರ ಸಹಾಯದಿಂದ ಕಾಣದುದನ್ನು ಗ್ರಹಿಸುವೆವು. ಬಾಹ್ಯ ವಸ್ತುವನ್ನು ನೋಡಿ ಅಂತರ್ಗತವಾದದ್ದನ್ನು ನೆನೆಯುವೆವು. ಮೂರ್ತಿಪೂಜೆ ಯನ್ನು ಮಾಡುತ್ತ ಮಾಡುತ್ತ ಸತ್ಯವಾದ ಪರಶಿವನ ರೂಪವು ಉದ್ದೀಪ್ತವಾಗು ವದು. ಅಲ್ಲದೆ ಮೂರ್ತಿಪೂಜೆಯೇ ಸ್ಫೂರ್ತಿಯನ್ನುಂಟು ಮಾಡುವದರಿಂದ

ಇಂಥ ಮೂರ್ತಿ ಸ್ಥಾಪನದಲ್ಲಿ ಶಿವನು ಗುರುವಿನ ಮಂತ್ರ ಸಂಸ್ಕಾರ ಬಲದಿಂದ ವಾಸಿಸುತ್ತಿರುವನೆಂದು ಶಾಸ್ತ್ರಗಳು ಹೇಳುತ್ತವೆ.

ಶ್ಲೋಕ: ಲಿಂಗಂಚ ದ್ವಿವಿಧಂ ಪ್ರೋಕ್ತಂ ಜಂಗಮಾ ಜಂಗಮಾತ್ಮನಾ। ಅಜಂಗಮೇ ಯಥಾ ಭಕ್ತಿರ್ಜಂಗಮೇಚ ತಥಾ ಸ್ಮೃತಾ। ಅಜಂಗಮಂತು ಯಲ್ಲಿಂಗಂ ಮೃಚ್ಛಿಲಾದಿ ವಿನಿರ್ಮಿತಂ॥ ತದ್ವರಂ ಜಂಗಮಂ ಲಿಂಗಂ ಶಿವಯೋಗೀ ತಿವಿ ಶ್ರುತಂ। ಅಚರೇ ಮಂತ್ರ ಸಂಸ್ಕಾರಾಲ್ಲಿಂಗೆ ವಸತಿ ಶಂಕರಃ। ಸದಾಕಾಲಂ ವಸತ್ಯೇವ ಚರಲಿಂಗ ಮಹೇಶ್ವರಃ॥

ಹೀಗೆ ಶಿವನ ರೂಪವು ಚರವೆಂತಲೂ ಅಚರವೆಂತಲೂ ಎರಡು ವಿಧವಾಗಿ ರುವವು. ಮೃಚ್ಛಿಲಾ ರೂಪಗಳೇ ಅಚರ ರೂಪವು. ಶಿವಯೋಗಿಗಳ ರೂಪವೇ ಚರರೂಪವು. ಜಂಗಮರಲ್ಲಾದರೂ ಮಹೇಶ್ವರನು ಯಾವಾಗಲೂ ವಾಸಿಸು ತ್ತಾನೆ. ಸ್ಥಾವರಲಿಂಗದಲ್ಲಿ ಶಂಕರನು ಗುರುವಿನ ಮಂತ್ರ ಸಂಸ್ಕಾರ ಬಲದಿಂದ ವಾಸಿಸುತ್ತಾನೆ. ಆದ್ದರಿಂದ ಅಚರ ರೂಪನಾದ ಶಿವನಲ್ಲಿ ಹೇಗೆ ಭಕ್ತಿಯೋ ಹಾಗೆ ಚರರೂಪ ಜಂಗಮನಲ್ಲಿಯೂ ಭಕ್ತಿ ಇರಬೇಕೆಂದು:

ಶ್ಲೋಕ: ಸ್ಥಾವರಂ ಜಂಗಮಂ ಚ ವದ್ವಿವಿಧಂ ಲಿಂಗ ಮುಚ್ಯತೇ।
ಜಂಗಮಸ್ಯಾವ ಮಾನೇನ ಸ್ಥಾವರಂ ನಿಷ್ಫಲಂ ಭವೇತ್॥

ಹೀಗೆ ಶಿವನು ಸ್ಥಾವರ ರೂಪವೆಂತಲೂ ಜಂಗಮ ರೂಪವೆಂತಲೂ ಹೇಳಿದ್ದರಿಂದ ಶಿವಲಿಂಗವು ಶಿವನಿಗೆ ಭಿನ್ನವಾದದ್ದಲ್ಲ, ಶಿವಸ್ವರೂಪವಾದದ್ದು. ಇದು ಸರ್ವವ್ಯಾಪಕವೂ ಸರ್ವಶಕ್ತಿಯುಳ್ಳದ್ದೂ ವಿಶ್ವರೂಪವೂ ವಿಶ್ವನಿಯಾಮ ಕವೂ ಆಗಿದೆ. ಇದುವೆ ಸರ್ವೋಪನಿಷತ್ತುಗಳಿಂದ ಹೇಳಲ್ಪಡುವ ಬ್ರಹ್ಮವು. ಪರಶಿವ ಲಿಂಗವೇ ಜಗತ್ತಿನ ಜನ್ಮಾದಿಗಳಿಗೆ ಕಾರಣವು. ಇದರಿಂದಲೇ ಸರ್ವ ವ್ಯವಹಾರವು ನಡೆಯುತ್ತದೆ. ಶಿವನ ಇಚ್ಛೆಯಿಲ್ಲದೆ ಲೋಕದಲ್ಲಿ ಒಂದು ಹುಲ್ಲು ಕಡ್ಡಿಯೂ ಸಹ ಅಲ್ಲಾಡುವದಿಲ್ಲ. ಪೂರ್ವದಲ್ಲಿ ಮದೋನ್ಮತ್ತರಾದ ಬ್ರಹ್ಮ, ವಿಷ್ಣು, ದೇವತೆಗಳಿಗೆ ಅನುಗ್ರಹಿಸುವದಕ್ಕಾಗಿ ಜ್ಯೋತಿರ್ಲಿಂಗ ರೂಪದಿಂದ ಅವ ರಿಗೆ ಕಾಣಿಸಿಕೊಂಡಾಗ ಅವರು ಆ ಲಿಂಗದ ಮಸ್ತಕ ಪಾದಗಳನ್ನು ನೋಡುವ ದಾಗಲಿಲ್ಲ; ಇದು ಸರ್ವೋತ್ಕೃಷ್ಟವಾದದ್ದು. ಈ ಲಿಂಗ ರೂಪಿಯಾದ ಶಿವನು ಜಗತ್ತನ್ನು ಮಾಡಬೇಕಾದರೆ ಮತ್ತೆ ಯಾವದೊಂದನ್ನು ಅಪೇಕ್ಷಿಸದೆ ತನ್ನ ಸಂಕಲ್ಪದಿಂದಲೇ ಮಾಡುವನೆಂದು ಶಾಸ್ತ್ರ ಹೇಳುತ್ತದೆ.

ಹೀಗೆ ಯಾವದೇ ಸ್ಥಲದಲ್ಲಿ ಸ್ಥಾವರ ಲಿಂಗಗಳಿಗಾಗಲಿ, ಶಿವಲಾಂಛನಧಾರಿ ಶಿವಯೋಗಿಗಳಿಗಾಗಲಿ ನಿಮ್ಮಂಥವರಿಂದ ಅಪಾಯವು ಸಂಭವಿಸುವ ವೇಳೆಯಲ್ಲಿ ಪ್ರಾಣವನ್ನಾದರೂ ಬಿಟ್ಟು ಬಂದ ಅಪಾಯವನ್ನು ಪರಿಹರಿಸಬೇಕೆಂದು ರೇಣುಕಾಚಾರ್ಯರು ತಮ್ಮ 'ಸಿದ್ಧಾಂತ ಶಿಖಾಮಣಿ'ಯಲ್ಲಿ ಬರೆದಿಟ್ಟಿರುವರು. ವೀರಶೈವರಿಗೆ ಸ್ಥಾವರ ಲಿಂಗ, ತೀರ್ಥಕ್ಷೇತ್ರಗಳು ನಿಷೇಧವಲ್ಲವೆಂದು ಶ್ರೀಶೈಲ, ಕಾಶಿ, ಕೇದಾರ, ಸಂಗಮನಾಥ ಮುಂತಾದ ಮಹಾಕ್ಷೇತ್ರಗಳು ವೀರಶೈವ ಮತ ಸ್ಥಾಪನಾಚಾರ್ಯರಿಂದ, ಮತ ಸುಧಾರಣೆ ಮಾಡಿದ ಬಸವಾದಿ ಪ್ರಮಥರಿಂದ ಇಲ್ಲೀ ಪರಿಯಂತರ ವೀರಶೈವರ ವಶದಲ್ಲಿವೆ. ಆದ್ದರಿಂದ ನೀವು 'ಶರಣರ ಸಂಘ'ವೆಂಬ ಹೆಸರಿಟ್ಟುಕೊಂಡು ಸ್ಥಾವರ ಲಿಂಗ ಮೂರ್ತಿಗಳು ನಿಷೇಧವೆಂದು ಹೇಳುವದು ಮೂರ್ಖತನವೇ ಸರಿ.

ಶ್ಲೋಕ: ದಿಗ್ಭಸ್ಮ ರಹಿತಂ ಫಾಲಂ ಧಿಗ್ಗ್ರಾಮ ಶಿವಾಲಯಂ।
ದಿಗನೀಶಾರ್ಚನಂ ಜನ್ಮ ದಿಗ್ವಿದ್ಯಾಮ ಶಿವಾಶ್ರಯಾಂ।

ಭಸ್ಮವಿಲ್ಲದ ಹಣೆಯನ್ನು, ಶಿವಾಲಯವಿಲ್ಲದ ಗ್ರಾಮವನ್ನು, ಶಿವಾರ್ಚನೆ ಇಲ್ಲದ ಜನ್ಮವನ್ನು ಶಿವನ ವಿಷಯವಿಲ್ಲದ ವಿದ್ಯೆಯನ್ನು ಸುಡುಯೆಂದು ಹೇಳಿದ್ದರಿಂದಲೂ:

ಶ್ಲೋಕ: ಕಾಶಾಂತು ಮರಣಾನ್ಮುಕ್ತಿ ಸ್ಮರಣಾ ದರುಣಾಚಲೇ।
ಶ್ರೀಶೈಲೇ ಶಿಖರೇ ದುಷ್ಟ್ವೇ ಪುನರ್ ಜನ್ಮ ನ ವಿದ್ಯತೆ॥

ಕಾಶಿಯಲ್ಲಿ ಮರಣವಾದರೆ, ಅರುಣಾಚಲದಲ್ಲಿ ಶಿವಸ್ಮರಣೆ ಮಾಡಿದರೆ, ಶ್ರೀಶೈಲ ಶಿಖರ ನೋಡಿದರೆ ಪುನರ್‌ಜನ್ಮವಿಲ್ಲೆಂದು ಹೇಳಿದ ಎಲ್ಲ ವಿಷಯಗಳನ್ನು ನೋಡಿದರೆ ಸ್ಥಾವರಲಿಂಗ ಕ್ಷೇತ್ರಗಳು ವೀರಶೈವರಿಗೆ ನಿಷೇಧವಲ್ಲವೆಂದು ತಿಳಿಯಿರಿ.

ಈಗ್ಯೂ ಕೂಡ ಕೇದಾರೇಶ್ವರ ಶಿಲಾಜ್ಯೋತಿರ್ಲಿಂಗದ ಪೂಜೆಯ ಹಕ್ಕು ವೀರಶೈವ ಮತಸ್ಥಾಪನಾಚಾರ್ಯ ಏಕೋರಾಮರಾಧ್ಯ ಪೀಠಕ್ಕೆ ಸೇರಿದ ಉಷಾಮಠ (ಅನಿರುದ್ಧನ ಹೆಂಡತಿ ಉಷಾದೇವಿ ಈ ಮಠವನ್ನು ಕಟ್ಟಿಸಿಕೊಟ್ಟಿದ್ದರಿಂದ ಉಷಾ ಮಠವೆಂದು ಹೆಸರು ಬಂದಿದೆ.) ದವರಿಗೇ ಇರುತ್ತದೆ. ನೇಪಾಳದಲ್ಲಿಯ ಪಶುಪತಿಲಿಂಗ ದೇವಸ್ಥಾನಕ್ಕೆ ವೀರಶೈವರೇ ಅರ್ಚಕರಿರುವರೆಂದೂ ಹಾಗು ಇಂಥ ಅನಂತ ಸ್ಥಾವರ ಲಿಂಗ ಕ್ಷೇತ್ರಗಳು ವೀರಶೈವರ ವಶದಲ್ಲಿ

ರುತ್ತವೆ. ಗದಗಿನ " ಶರಣ ಸೇವಾ ಸಂಘ "ವೆಂಬ ಪವಿತ್ರ ನಾಮವನ್ನಿಟ್ಟುಕೊಂಡು ಬರೆಯುವ ಇವರಿಂದ ವೀರಶೈವ ವಶವಲ್ಲಿರುವ ಮಹಾ ಮಹಾ ಕ್ಷೇತ್ರ ದೇವಸ್ಥಾನಗಳಿಗೆ ಹಾನಿ ತಪ್ಪದಿರಲಾರದು. ಆದ್ದರಿಂದ ಇವರ ಬರಹಕ್ಕೆ ಯಾರೂ ಬೆಲೆಕೊಡಬಾರದೆಂದು ವಿನಂತಿ.

ಶರಣರ ಮಾರ್ಗವೆಂಬ ತ್ರೈಮಾಸಿಕದ ೩ನೇ ಸಂಚಿಕೆಯಲ್ಲಿ ಬರೆದ ಇವನ ಕುಚೋದ್ಯ ಲೇಖ ನೋಡಿರಿ. ಗುರುಜಂಗಮರ ಉನ್ನತದ ಸ್ಥಿತಿಯನ್ನು ಕಂಡು ಸಹನವಾಗದೆ ಇವುಗಳನ್ನು ಮರೆಮಾಜಿ, ತನಗೆ ಅನುಕೂಲವಾದವುಗಳನ್ನು ಕೊಟ್ಟು ಪ್ರತಿಕೂಲವಾದವುಗಳನ್ನು ಹೇಗೆ ಬಿಟ್ಟಿರುವನೆಂಬುದನ್ನು ವಾಚಕರ ಮುಂದಿಡುತ್ತೇನೆ. ಮಂತ್ರವಾದಿಯಲ್ಲಿಯೂ ಹೀಗೇ ಅವೆ ಎಂಬುದನ್ನು ತಿಳಿಯಿರಿ. ಮೈಲಾರ ಬಸವಲಿಂಗ ಶರಣರು ಬರೆದ ಧರ್ಮಾಚಾರ ೧೩ನೇ ಪದ್ಯ:

ಪದ್ಯ: ವರಸದಾ ಶಿವನಿಂದ ಮಹೇಶ್ವರೇಶ್ವರ ನಿಂದೆ। ಸ್ಫುರಿತರುದ್ರನು ರುದ್ರ ನಿಂದೆ ಹರಿಹರಿಯಿಂದೆ। ನಿರುತವಜನಜೆ ನಿಂದೆ ನರಲೋಕ ಮುತ್ಪತ್ತಿಯಾಗಲ್ಪಡೋ ಸೃಷ್ಟಿಯು। ಪರಶಿವನಿಗಧಿಕ ಗುರು ಗುರುವಿಗಿಮ್ಮಡಿ ಲಿಂಗ। ಗುರುಲಿಂಗವೆರಡರ ಸುಚೈತನ್ಯ ಜಂಗಮವು। ಪರಿಪೂರ್ಣ ಜಂಗಮದ ಚಿತ್‌ಕಳೆಯು ಸದ್‌ಭಕ್ತನಹುದರಿಂದೂರ್ಧ್ವ ಸೃಷ್ಟಿ ||

ಜಂಗಮದ ಜ್ಞಾನ ಕಳೆಯೇ ಸದ್ಭಕ್ತನು, ಈ ಸದ್ಭಕ್ತನಕಿಂತಲೂ ಯಾರೂ ಮಿಗಿಲಿಲ್ಲ. ವಿಭೂತಿ ರುದ್ರಾಕ್ಷಿಯ ಧರಿಸಿ, ಲಿಂಗನಿಷ್ಠಾಪರನಾಗಿ, ಲಿಂಗಾರ್ಚನೆ ಮಾಡಿ ಸಕಲ ಪದಾರ್ಥವ ಲಿಂಗಕ್ಕೆ ಕೊಟ್ಟು, ಲಿಂಗ ಪ್ರಸಾದವ ಕೊಂಡು, ಲಿಂಗ ಸುಖ–ಸಂಪನ್ನರಾದ ಲಿಂಗ ಭೋಗೋಪಭೋಗಗಳಲ್ಲಿ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು ಸದಾಸನ್ನಿಹಿತನು.

ವಚನ: ಎಲೆ ಶಿವನೆ ನಾನಿಮ್ಮನೊಂದು ಬೇಡಿಕೊಂಬೆನು ನಿಮ್ಮ ಶರಣರ ಮೂರ್ತಿಯ ಕಂಡೊಡೆ ನೀವೆಂದೆ ಕಾಂಬಂತೆ ಮಾಡಯ್ಯಾ। ನಿಮ್ಮ ಶರಣರ ನುಡಿಯೇ ಕೇಳಿದೊಡೆ ನಿಮ್ಮ ನುಡಿಯೆಂದು ನಂಬುವಂತೆ ಮಾಡಯ್ಯಾ। ನಿಮ್ಮ ಶರಣರ ಸುಖವೆಲ್ಲ ನಿಮ್ಮ ಸುಖವೆಂದು ತಿಳಿವಂತೆ ಮಾಡಯ್ಯಾ। ನಿಮ್ಮ ಶರಣರಾಡಿದ್ದೆಲ್ಲ ನಿಮ್ಮ ಲೀಲೆಯೆಂದು ಅರಿವಂತೆ ಮಾಡಯ್ಯಾ। ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ

ಹೀಗೆ ಕೆಲವು ಜ್ಞಾನಸ್ಥಲ ವಚನ ಬರೆದು ಭಕ್ತರನ್ನು ಹುರಿದುಂಬಿಸಿ ಅವರ ಹಣವನ್ನು ಸುಲಿದು, ತಮ್ಮ ಸ್ವಾರ್ಥ ಸಾಧಿಸಲಿಕ್ಕೆ ಗುರು ಜಂಗಮ ಸ್ಥಲದ ಸೂರ್ಯ ಪ್ರಕಾಶದ ಮೇಲೆ ಭಕ್ತಸ್ಥಲವೆಂಬ ಮಂಜನ್ನು ಚೆಲ್ಲಿ, ಶರಣ ಸ್ಥಲದ ಮೋಡವನ್ನು ಗವಿಸಿ, ಗುರುಜಂಗಮರ ಸೂರ್ಯ ಪ್ರಕಾಶವನ್ನಡಗಿಸುವ ಗವಗಿನ ಶರಣರ ಸಂಘವು ಪ್ರಯತ್ನ ಮಾಡಲಿಕ್ಕೆ ಹತ್ತಿದೆ. ಅದೇ ಮೈಲಾರ ಬಸವಲಿಂಗ ಶರಣರು ಹಾಡಿದ ಗುರುಲಿಂಗಜಂಗಮದ ಅವಶ್ಯ ಭಕ್ತರಿಗೆ ಹೇಗಿದೆ ಎಂಬುವದನ್ನು ಇಲ್ಲಿ ಕೊಟ್ಟಿರುವೆ ನೋಡಿರಿ.

ಪದ್ಯ: ಜ್ಯೋತಿಯ ಪ್ರಕಾಶಕ್ಕೆ ತೈಲವೇ ಜೀವನವು। ಪ್ರೀತಿಯ ಷಡ್ರುಚಿಗೆ ಲವಣವೇ ಕಾರಣವು। ಮಾತು ಮಸ್ಲಿಂಗಾತ್ಮ ಜೀವಾಳ ಪಾತ್ರಗನ್ನ ರಸವೆ ಜೀವಾಳವು। ಭೂತಳದ ಬೆಳೆಗಳಿಗೆ ಮಳೆ ಜೀವನವು। ದೀತರ ದೊಳಂತವಕೆ ಜೀವನಗಳಾದಂತೆ। ಯೋತು ಗುರುಲಿಂಗಜಂಗಮ ಪ್ರಸಾದಕ್ಕೆ ಸದ್ಭಕ್ತ ಜೀವನವಲಾ॥

ಈ ಪ್ರಕಾರ ಗುರುಜಂಗಮ ಸ್ಥಲಗಳು ಅಷ್ಟಾವರ್ಣಾಂತರ್ಗತರಾಗಿ ವೀರಶೈವ ಮತ ಹುಟ್ಟಿದಂದಿನಿಂದ ಇಲ್ಲೀ ಪರ್ಯಂತರ ಪೂಜಿಸಿಕೊಳ್ಳುತ್ತ ಬಂದಿದ್ದಾರೆ. ಇವರು ಹೊಸದಾಗಿ ಸಂಸ್ಕಾರ ಹೊಂದಿ ಅಧಿಕಾರಕ್ಕೆ ಬಂದಿಲ್ಲ. ಬ್ರಾಹ್ಮಣ ವಂಶದಲ್ಲಿ ಹುಟ್ಟಿ, ಉಪನಯನ ಹೊಂದಿ, ಬ್ರಾಹ್ಮಣರಾಗುತ್ತ ಬಂದಂತೆ, ಗುರುಸ್ಥಲ ಮಠದಯ್ಯನವರು ಷಡಧ್ವಶೋಧನ ದೀಕ್ಷೆ ಹೊಂದಿ ಗುರುಜಂಗಮರಾಗಿ ವಂಶಪರಂಪರವಾಗಿ ಬಂದದ್ದರಿಂದಲೇ ಬಸವಾದಿ ಪ್ರಮಥರು, ಮೈಲಾರ ಬಸವಲಿಂಗ ಶರಣರು, ಕಲಬುರ್ಗಿ ಶರಣ ಬಸವಪ್ಪನವರು, ಕಬ್ಬೂರ ಶರಣರು ಮುಂತಾದ ಶಿವಭಕ್ತ ವೃಂದವು ಈ ಗುರುಜಂಗಮರನ್ನು ಪೂಜಿಸಿ, ಅವರ ತೀರ್ಥಪ್ರಸಾದ ಸಲ್ಲಿಸಿ, ಮುಕ್ತರಾದ ವಚನಗಳನ್ನು ಇಲ್ಲಿ ಕೊಟ್ಟಿದೆ ನೋಡಿರಿ.

ವಚನ: ಭಕ್ತದೇಹಕ ದೇವನೆಂಬ ಅಂಜದ ಮತವಿದೇನಪ್ಪದೋ। ಭಯವಿಲ್ಲದ ಭಕ್ತಿ ದಯವಿಲ್ಲದ ಶೀಲ ಗುಣವಿಲ್ಲದ ನಂಟು ಮುಂದೇನಪ್ಪದೋ। ಭಯವರಿದು ಲಿಂಗದೊಡನೆ ಸಹ ಭೋಜನ ಮಾಡಿದರೆ ಪಂಚ ಮಹಾಪಾತಕ ತಪ್ಪದು। ಅದೆಂತೆಂದೊಡೆ ಗುರು ಬಿಟ್ಟು ಲಿಂಗವನೊಲಿಸುವನೆಂದರೆ ಗುರುಲಿಂಗವು ಎರಡು ಇಲ್ಲದೆ ಹೋಗ್ಗವು। ಗುರುಯೆಂಬುದೇ ಭಯಭಕ್ತಿ ಲಿಂಗವೇ ಶಿವನು। ಆ ಭಯಭಕ್ತಿ ಇಲ್ಲದೆ ಶಿವನೊಲಿಸಬಾರದೆ ರೇಕಣ್ಣ ಪ್ರಿಯ ನಾಗನಾಥಾ॥

ವಚನ: ಅಂಗವನು ನಿರ್ವಂಚನೆಯೊಳು ಗುರುವಿಂಗಿತ್ತು ! ಹೊಂಗಿ ಮನವನು ತಂದು ಲಿಂಗವನು ನೆಲೆಗೊಳಿಸಿ ! ಲಿಂಗದಾತ್ಮನ ಜಂಗಮಗೆ ಸಲಿಸಿ ಬಳಿಕ ಗುರು ಲಿಂಗ ಜಂಗಮದೊಳಗದ ! ಮಂಗಳ ಪ್ರಸಾದ ವಿಷ್ಟ ಪ್ರಾಣಭಾವ ಶ್ರೀ ! ಲಿಂಗಪಾರೋಗಣೆಯ ಮಾಳ್ಪರಡಿದಾವರಿಗೆ ! ಭೃಂಗಸಂತೆರುಗುತಿಹರಾಳಿ ನಾಳೆಂಬ ಶರಣಂಗೆ ಭೃತ್ಯಾಚಾರವು ||

ವಚನ: ಸದಾಚಾರದಲ್ಲಿ ನಡೆವವನು ಶಿವನಲ್ಲಿ ಭಕ್ತಿಯಾಗಿಪ್ಪವನು ! ಶಿವಲಾಂಛನ ಕಂಡಲ್ಲಿ ವಂದನೆಗೈವತಿಪ್ಪವನು ! ಗುರುಲಿಂಗಜಂಗಮವೆ ಒಂದೇ ಭಾವದಲ್ಲಿ ಕಂಡು ಭೃತ್ಯಾಚಾರ ಸದಾಚಾರ ಯುಕ್ತರಾಗಬಲ್ಲರೆ ! ಭಕ್ತಸ್ಥಲವಿದೆಂಬೆನಯ್ಯಾ ಮಹಾಲಿಂಗ ಗುರು ಶಿದ್ಧೇಶ್ವರ ಪ್ರಭುವೇ ||

ವಚನ: ಮಾಂಸಕ್ಕೆ ಮೆಚ್ಚಿದ ಅರಸುಗಳು ನಾಯಿಯಂಜಲ ತಿಂದು ನರಕಕ್ಕಿಳಿದು ಹೋದರು! ಸೂಳೆಯ ಮೆಚ್ಚಿದವರು ಸೂಳೆಯ ಮಿಂಡನ ಎಂಜಲ ತಿಂದು ನರಕಕ್ಕಿಳಿದು ಹೋದರು ! ಇದು ಲೋಕಪ್ರಸಿದ್ಧವಾಗಿ ಅರಿಯಲುಂಟು ಲಿಂಗವ ಮೆಚ್ಚಿದ ಸದ್ಭಕ್ತರು ! ಗುರುಲಿಂಗಜಂಗಮದ ಒಕ್ಕುಮಿಕ್ಕ ಶ್ರೇಷ್ಠ ಪ್ರಸಾದವ ಕೊಂಡು ಆಗಳಂತೆ ಮೋಕ್ಷವ ನೈದಿದರೆಂಬವು ||

ಶಿವರಹಸ್ಯದಲ್ಲಿ:

ವಚನ: ಶ್ವಾನೋಚ್ಛಿಷ್ಟಂ ಜಗತ್ರಯಂ ! ನ ತಥಾ ಜಂಗಮೋಚಿಷ್ಟಂ ಸದ್ಯೋ ಮೋಕ್ಷ ನ ಸಂಶಯಾ || ಎಂದುದಾಗಿ ಇದನರಿದು ಗುರುಲಿಂಗಜಂಗಮ ಪ್ರಸಾದವ ಕೊಂಬುದು ಕಂಡುನಿಂದಿಸುವರ ಬಾಯಲ್ಲಿ ಬಾಲಹುಳಗಳು ಸುರಿಯದೆ ಮಾಂಬವೆ ಕೂಡಲ ಚನ್ನ ಸಂಗಮದೇವಾ ||

ಎಂದು ಹೇಳಿರುವರಲ್ಲದೆ, ಗುರುಲಿಂಗಜಂಗಮರು ಪರಮಾತ್ಮನ ದಿವ್ಯ ಸಾನ್ನಿಧ್ಯವನ್ನು ತೋರಿಸುವ ವ್ಯಕ್ತಿಗಳಾದ್ದರಿಂದ ಇಂಥವರನ್ನು ನಿಂದಿಸುವವರ ಗತಿ ಏನಾಗುವದೆಂಬುದನ್ನು ಹಾಡಿದ್ದಾರೆ ನೋಡಿರಿ.

ವಚನ: ಲಿಂಗದೊಡನೆ ಸಹ ಭೋಜನವ ಮಾಡುವ ಸದ್ಭಕ್ತನ ಆಚರಣೆ ಕ್ರಿಯೆಗಳೆಂತುಂಟಯ್ಯಾ ! ಅಂದರೆ ಜಂಗಮದ ಪಾದೋದಕವ ತನ್ನ ಲಿಂಗಕ್ಕೆ ಮಜ್ಜನವ ಮಾಡುವಲ್ಲಿ ಜಂಗಮದ ಕುಂದು ನಿಂದೆಯಂ

ಕೇಳಲಾಗದು । ಅಥವಾ ಕೇಳಿದೊಡೆ ಆ ನಿಂದಕನಂ ಕೊಲ್ಲುವದು ಕೊಲ್ಲಲಾರದಿದ್ದೊಡೆ ತನ್ನ ತಾನಿರಿದುಕೊಂಡು ಸಾವದು । ಸಾಯಲಾರದಿದ್ದೊಡೆ ಅವನ ಬೈವ್ವದು । ಇಷ್ಟಳ್ಳೊಡೆ ಜಂಗಮದ ಪಾದೋದಕವ ಲಿಂಗಕ್ಕೆ ಮಜ್ಜನಕ್ಕೆರೆವದು । ಅಲ್ಲದಿರ್ದೊಡೆ ಸುಮ್ಮನಿಹುದು । ಪಾದತೀರ್ಥವ ಕೊಳ್ಳದೆ ( ) ಲಿಂಗಕ್ಕೆ ಜಂಗಮದ ಪ್ರಸಾದವ ಸಮರ್ಪಿಸಿಕೊಂಬ ಭಕ್ತನ ಕ್ರಮವು ಹೇಗೆಂದೊಡೆ ತನ್ನ ಅರ್ಥ ಪ್ರಾಣಾಭಿಮಾನವನು ಜಂಗಮವು ಬಂದು ಮುಟ್ಟಿದಲ್ಲಿ ಕಂಡು ಕೇಳಿ ಶಿವಾರ್ಪಣವಾಯಿತ್ತೆಂದು ಮನದಲ್ಲಿ ಸಂತೋಷವ ತಾಳಿದಡೆ ಪ್ರಸಾದವುಂಟು । ಇಂತಲ್ಲದೆ ಮನದಲ್ಲಿ ನೋವತಾಳಿ ಆ ಜಂಗಮವನುದಾಸೀನವ ಮಾಡಿ ಬಿಟ್ಟನಾದೊಡೆ । ಹಿಂದಕ್ಕೆ ಕೊಂಡ ಪಾದ ತೀರ್ಥವೆಲ್ಲವು ಅವರ ಮೂತ್ರವಕೊಂಡ ಸಮಾನ । ಹಿಂದಕ್ಕೆ ಕೊಂಡ ಪಾದ ತೀರ್ಥವೆಲ್ಲವು ಅವರ ಮಲವತಿಂದ ಸಮಾನ । ಇದು ಕಾರಣ ಅವನು ಗುರುವಾಜ್ಞೆಯ ಮೀರಿದ ಆಚಾರ ಭ್ರಷ್ಟನು ಎನ್ನ ಮನೆ ಎನ್ನ ಧನ ಎನ್ನ ಸತಿಯೆಂಬನಕ್ಕರ ಅವನು ಭವಿಯ ಸಮಾನ। ಭಕ್ತನಲ್ಲ ಪ್ರಸಾದಿಯಲ್ಲ ಶೀಲವಂತನಲ್ಲ ಅವಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ಪಾದ ತೀರ್ಥ ಪ್ರಸಾದ ಮುನ್ನವೇ ಯಿಲ್ಲ । ಅವನಿಗೆ ಕುಂಭೀಪಾತಕ ನಾಕ ನರಕ ತಪ್ಪದು । ಉರಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ ॥

ಇದರಿಂದ ನಿಂದಕರ ಗತಿ ಏನಾಗುವುದೆಂಬದನ್ನು ವಾಚಕರೆ ವಿಚಾರಿಸಲಿ.

ವಚನ: ಗಂಡನಿಗಿಂತ ಹೆಂಡತಿ ಮೊದಲೇ ಹುಟ್ಟಿದರೂ ಗಂಡನಿಗಿಂತ ಕಿರಿಯಳಲ್ಲದೆ ಹಿರಿಯಳಲ್ಲ ನೋಡಾ । ಗುರುವಿಗಿಂತ ಶಿಷ್ಯ ಅರಹುಳ್ಳವನಾದರೂ ಗುರುವಿಂಗೆ ಭೃತ್ಯನಲ್ಲದೆ ಕರ್ತನಲ್ಲವಯ್ಯಾ । ಕುದುರೆಯ ಹಿಡಿಯ ಹೇಳಿದರೆ ರಾವುತಿಕೆಯ ಒಪ್ಪುವರೆ । ಆಳಾಗಿದ್ದು ಅರಸನಾಗಿ ಇದ್ದೇನಂದರೆ ಒಪ್ಪುವರೇ । ಮಗನೇನು ತಂದೆಯಾಗ ಬಲ್ಲನೇ । ಇದು ಕಾರಣ ಶಿಷ್ಯಂಗೆ ಭಯಭಕ್ತಿ ಕಿಂಕುರ್ವಾಣವೇ ಇರಬೇಕು । ಈ ಗುಣವುಳ್ಳರೆ ಆ ಶಿಷ್ಯನೇ ಗುರುವಪ್ಪದು ತಪ್ಪದು ಕಾಣಾ ಮಹಾಲಿಂಗ ಗುರುಶಿವ ಶಿದ್ಧೇಶ್ವರ ಪ್ರಭುವೇ ॥

ಸನಾತನ ಗುರುಲಿಂಗಜಂಗಮನನ್ನು ಅಷ್ಟಾವರ್ಣಗಳಲಿಯ ಸಾನ

ವನ್ನು ಬವಲಿಸಬೇಕೆಂಬ ಇವರ ಮೂರ್ಖತನವ ಜಿಗಿದಾಟಕ್ಕೆ ಜ್ಞಾನಿಗಳು ನಗದಿರರೇ. ಇಂಥ ದುಷ್ಟ್ವರ್ಮ ದುರ್ವಿಚಾರಗಳಲ್ಲಿ ತಮ್ಮ ಬುದ್ಧಿಯನ್ನುಪ ಯೋಗಿಸಿ ಪುರಾತನರು ನಿರ್ಮಿಸಿದ ಅಷ್ಟಾವರ್ಣಗಳನ್ನು ಹವಗೆಡಿಸಿ ವೀರಶೈವ ಸಮಾಜದಲ್ಲಿ ಪಕ್ಷ ಪಂಗಡಗಳನ್ನು ಹುಟ್ಟಿಸಿ ಛಿದ್ರ ಮಾಡಲಿಕ್ಕೆ ಹತ್ತಿದ್ದಾರೆ. ನಮ್ಮ ಸನಾತನ ವೀರಶೈವ ವೈದಿಕ ಧರ್ಮ ಗುರುಗಳಾದ ಮಠದಯ್ಯನವರ ಪವಿತ್ರತೆಯನ್ನು ಶೃತಿ ಆಗಮ ಸ್ಮೃತಿ ಪುರಾಣಗಳಲ್ಲಿ ವಚನಗಳಲ್ಲಿ ಸಹ ಹೇಳಿದ ಪ್ರಕಾರ ಗುರುಸ್ಥಲದ ಮಠದಯ್ಯನವರನ್ನು ಅಪಪ್ರಚಾರ ಮಾಡುವ ಶರಣ ಸಂಘವು ಮೊದಲು ಶಿರಸಂಗಿ ದೇಸಾಯರು ತಮ್ಮ ಆಸ್ತಿಯನ್ನು ವೀರಶೈವ ಸಮಾಜ ವಿದ್ಯಾಭಿವೃದ್ಧಿಗೆ ದಾನಮಾಡಿದ್ದಾರಷ್ಟೆ. ಅದರಲ್ಲಿ ಮೊದಲು ತಮ್ಮ ಕುಡವಕ್ಕಲ ಜಾತಿಯವರಿಗೆ ಮೊದಲಿನ ವೇತನಕೊಟ್ಟು ಹಿಂದಿನಿಂದ ಬಾಕಿ ಜಾತಿಯವರಿಗೆ ಕೊಡಬೇಕೆಂದು ತಮ್ಮ ಮೃತ್ಯುಪತ್ರದಲ್ಲಿ ಬರೆದಿಟ್ಟಿದ್ದಾರೆ. ಮೊದಲು ಅದನ್ನು ತಿದ್ದಿಸಿರಿ. ಕೈ. ವಾ. ವೀರಸಂಗಪ್ಪನವರು ವೀರಶೈವ ಆಜೀವ ಸಭಾಧ್ಯಕ್ಷರಾದ ಸಿ. ಆರ್. ಕರಿಬಸವ ಶಾಸ್ತ್ರಿಗಳು, ಕೈ. ರಾವಬಾಹಾದ್ದೂರ ಸೊಲ್ಲಾಪುರದ ವಾರದ ಮಲ್ಲಪ್ಪನವರು ವೀರಶೈವರಲ್ಲಿ ವರ್ಣಾಶ್ರಮ ಧರ್ಮ ಗಳುಂಟೆಂಬ ಬಗ್ಗೆ ಇಲಾಗಸೇ ಇಸ್ತಿಯಲ್ಲಿ ಲಕ್ಷಾಂತರ ಹಣ ಖರ್ಚು ಮಾಡಿ ಸರಕಾರದ ಕೂಡ ಬಡಿದಾಡಿ ವೀರಶೈವರಲ್ಲಿ ವರ್ಣಾಶ್ರಮ ಧರ್ಮ ಉಂಟೆಂಬ ಬಗ್ಗೆ ಸಿದ್ಧಪಡಿಸಿ ಮೈಸೂರ ಸರಕಾರದಲ್ಲಿ ದಾಖಲ ಮಾಡಿಸಿ ವೀರಶೈವರ ಮಾನ ಉಳಿಸಿಕೊಂಡು ಈ ವರ್ಣಾಶ್ರಮದ ಬಗ್ಗೆ ೬೦-೭೦ ಗ್ರಂಥಗಳನ್ನು ಸಹ ಮುದ್ರಣ ಮಾಡಿಸಿದ್ದಾರೆ. ಇದನ್ನೆಲ್ಲ ತಿಳಿಯದೆ, ಮನೆ ಕೆಲಸ ಮಾಡಲಾರದ ಬಾಜಾರಿ ಹೆಂಗಸು ಬೆಳಗಾಗುತ್ತಲೆ ನೆವತೆಗೆದು ನೆರೆಯವರ ಸಂಗಡ ಕಾಲು ಕೆದರಿ ಜಗಳ ತೆಗೆವಂತೆ ಸನಾತನ ಗುರುಜಂಗಮರೊಡನೆ ಕಾಲು ಕೆದರಿ ಜಗಳ ತೆಗೆಯುವದು ದುಃಖದ ಸಂಗತಿಯು. ಪತಿವ್ರತೆಯು ತನ್ನ ಪತಿಯೇ ಆದಿದೈವ ವಾಗಿ ತೋರುವಂತೆ ಇಲ್ಲಿ ಪರಿಯಂತರ ವೀರಶೈವ ಭಕ್ತಾದಿಗಳಿಗೆ ಅಷ್ಟಾ ವರ್ಣಾಂತರ್ಗತ ಮೊದಲನೇ ಗುರು ಪಂಚಾಚಾರ್ಯರ ಪವಿತ್ರ ವಂಶದ ಮಠಸ್ಥರನ್ನು ಬಿಟ್ಟು ಎರಡನೇ ಗುರುಗಳನ್ನು ಮಾಡಿಕೊಳ್ಳುವದು ಲಗ್ನದ ಗಂಡನನ್ನು ಬಿಟ್ಟು, ಬಜಾರಿಯು ಉಪಕಿ ಗಂಡನ ಕೂಡ ಬಾಳ್ವೆ ಮಾಡುವವಳಂತೆಯೇ ಸರಿ.

— ಮುಗಿದುದು —